# ಅಧ್ಯಾತ್ಮಪ್ರಕಾಶ

' एतज्ज्ञेयं नित्यमेवाऽऽत्मसंस्थं नातः परं वेदितव्यं हि किञ्चित् '

ಸಂಪುಟ ೫೨ ಜೂನ್ ೧೯೮೩ ಸಂಚಿಕೆ ೧೦



ಪತ್ರಿಕೆಯ ಚಂದಾ
ಹೊಸವರ್ಷಕ್ಕೆ
ರೂ. ೧೫-೦೦

ಪೋಷಕರಿಗೆ ರೂ. ೨೦-೦೦

ಮಹಾಪೋಷಕರಿಗೆ ರೂ. ೧೫೧-೦೦

ವಿಷಯಗಳು





ಹೊಸವರ್ಷಕ್ಕೆ
ಚಂದಾಹಣವನ್ನು
ಈಗಲೆ ಕಳುಹಿಸಿರಿ.

ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ :
ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,
ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211

June 1983

# ಕಾರ್ಯಾಲಯದ ಸುದ್ದಿ

**ಅನುಷ್ಠಾನ :** ಶ್ರೀಶಂಕರಜಯಂತೀಮಹೋತ್ಸವವು ಕಾರ್ಯಾಲಯದಲ್ಲಿ ತಾ॥ 13ರಿಂದ ಐದು ದಿನಗಳ ಕಾಲ ನಡೆದು ಶಂಕರಜಯಂತೀ ದಿನ ಮಂಗಳವಾಯಿತು. ಆ ದಿನ ವಿಶೇಷಪೂಜಾದಿಗಳ ಜೊತೆಗೆ ಬ್ರಹ್ಮಸೂತ್ರಭಾಷ್ಯಗ್ರಂಥದ ಅರ್ಚನೆ, ರಾಜಬೀದಿಗಳಲ್ಲಿ ಉತ್ಸವಾದಿಗಳು ಸಹ ನೆರವೇರಿ ಭಗವತ್ಪಾದರ ಹಾಗೂ ಬ್ರಹ್ಮೀಭೂತ ಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳ ಸಮಾಧಿ ಸನ್ನಿಧಿಯಲ್ಲಿ ಗ್ರಂಥವನ್ನು ಅನಾವರಣಮಾಡಲಾಯಿತು. ಬೆಂಗಳೂರು ಶಾಖಾಕಾರ್ಯಾಲಯದಲ್ಲಿಯೂ ಪ್ರಕಟಿಸಿದ್ದ ಕಾರ್ಯಕ್ರಮದಂತೆ ಶ್ರೀಶಂಕರಸಪ್ತಾಹಮಹೋತ್ಸವವು ವಿಜೃಂಭಣೆಯಿಂದ ನೆರವೇರಿತು. ಉಭಯಸ್ಥಳಗಳಲ್ಲಿಯೂ ವಿದ್ವಾಂಸರುಗಳೂ ಭಕ್ತರೂ ಭಾಗವಹಿಸಿದ್ದು ಉತ್ಸವವನ್ನು ಯಶಸ್ವಿಗೊಳಿಸಿದರು.

**ಬ್ರಹ್ಮಸೂತ್ರಭಾಷ್ಯ :** ಇದರ ಮಾರಾಟವೂ ಕಾಂಪ್ಲಿಮೆಂಟರಿ ಕಾಪಿಗಳ ರವಾನೆಯೂ ಆರಂಭವಾಗಿವೆ. ಬೆಂಗಳೂರು ಶಾಖಾಕಾರ್ಯಾಲಯದಲ್ಲಿಯೂ, ನಗರದಲ್ಲಿ ನಮ್ಮ ಗ್ರಂಥಗಳನ್ನು ಮಾರಾಟಮಾಡುವ ವ್ಯಾಪಾರಿಗಳಲ್ಲಿಯೂ ಈ ಗ್ರಂಥವು ಮಾರಾಟಕ್ಕೆ ದೊರೆಯುತ್ತದೆ. ರೂ. ೨೫೦ ಕ್ಕೂ ಮೇಲ್ಪಟ್ಟು ಧನ ಸಹಾಯವನ್ನು ನೀಡಿರುವವರು ದಯವಿಟ್ಟು ತಮ್ಮ ತಮ್ಮ ಕಾಂಪ್ಲಿಮೆಂಟರಿ ಕಾಪಿಗಳನ್ನು ಪಡೆಯಲು ಈಗಿನ ವಿಳಾಸಸಮೇತ ಒಂದು ಪತ್ರವನ್ನು ಬರೆಯಬೇಕಾಗಿ ಕೋರಿದೆ. ಬ್ರಹ್ಮಸೂತ್ರಭಾಷ್ಯಗ್ರಂಥದ (೨ಸಂಪುಟಗಳೂ ಸೇರಿ) ಈಗಿನ ಬೆಲೆ ರೂ. ೧೫೦-೦೦ ಅಂಚೆವೆಚ್ಚ ರೂ. ೧೫.

**ಗ್ರಂಥಪ್ರಕಟನೆ :** ಉಪದೇಶಸಾಹಸ್ರಿ (ಗದ್ಯ)-ಪರಮಾರ್ಥಚಿಂತಾಮಣಿ- ಇವು ಸದ್ಯದಲ್ಲೇ ಹೊರಬೀಳಲಿವೆ. ಉಳಿದ ಗ್ರಂಥಗಳ ಮುದ್ರಣವು ನಡೆಯುತ್ತಿದೆ.

**ಸಂಪಾದಕರು :** ಮೇ ತಾ॥ 18-19ರಂದು ಹಾಸನದಲ್ಲಿ ಶ್ರೀ ವಿರೂಪಾಕ್ಷ ದೇವಾಲಯದಲ್ಲಿ ಶಂಕರರ ಉಪದೇಶಗಳನ್ನು ಕುರಿತು ಪ್ರವಚನಮಾಡಿದರು. ತಾ॥ 21-5-83 ರಿಂದ ಮೂರು ದಿನಗಳ ಬೆಂಗಳೂರು ಶಾಖಾಕಾರ್ಯಾಲಯದಲ್ಲಿ ನಡೆದ ಶಂಕರಜಯಂತೀ ಉತ್ಸವದಲ್ಲಿ ಭಾಗವಹಿಸಿ ಪ್ರವಚನಗಳನ್ನು ನೀಡಿದರು. ತಾ॥ 9-5-83ರಂದು ಶಿವಮೊಗ್ಗದಲ್ಲಿ ಹೃಷೀಕೇಶದ ಶ್ರೀಸ್ವಾಮಿ ದಯಾನಂದ ಸರಸ್ವತೀಮಹಾಸ್ವಾಮಿಗಳನ್ನು ಸಂದರ್ಶಿಸಿ ಆಧ್ಯಾತ್ಮವಿಚಾರವಾಗಿ ಸಂಭಾಷಣೆಯನ್ನು ನಡೆಸಿದರು. ಪೂಜ್ಯ ಶ್ರೀಶ್ರೀಗಳವರಿಗೆ ಕಾರ್ಯಾಲಯದ ಪರವಾಗಿ ಒಂದು ಸೆಟ್ ಸಂಸ್ಕೃತಗ್ರಂಥಗಳನ್ನು (ಬ್ರಹ್ಮೀಭೂತ ಶ್ರೀಸಚ್ಚಿದಾನಂದಸರಸ್ವತೀಸ್ವಾಮಿಗಳ ಕೃತಿಗಳು) ಕಾಣಿಕೆಯಾಗಿ ಅರ್ಪಿಸಿದರು. ಶ್ರೀ ದಯಾನಂದಜೀಯವರು ಬಹಳ ಸಂತೋಷಪಟ್ಟು ಪಂಡಿತರನ್ನು ಹರಸಿದರು.

**ಹೊರಗಿನ ಸುದ್ದಿಗಳು :** (೧) ಕೋಲಾರ (೨) ಹಾಸನ (೩) ಹೊಂಬಳ (೪) ಕುಂದಗೋಳ (೫) ಆದವಾನಿ (೬) ಗದಗ- ಈ ಸ್ಥಳಗಳಲ್ಲಿ ಶಂಕರಜಯಂತೀ ಉತ್ಸವವು ನಾನಾಕಾರ್ಯಕ್ರಮಗಳೊಡನೆ ನೆರವೇರಿರುವದಾಗಿ ಕಾರ್ಯಕರ್ತರು ತಿಳಿಸುತ್ತಾರೆ. ಚಿಕ್ಕಮಗಳೂರು ಧರ್ಮದೀಪಗೃಹದಲ್ಲಿ ಈಚೆಗೆ ಭಾಗವತ ಸಪ್ತಾಹವು ಶ್ರೀ ಜಯತೀರ್ಥಾಚಾರ್ಯರಿಂದ ನೆರವೇರಿದುದಾಗಿ ತಿಳಿದುಬಂದಿದೆ.

---

# ಅಧ್ಯಾತ್ಮಪ್ರಕಾಶ

ಸಂಪುಟ ೫೨]   ವರ್ಷಕ್ಕೆ ರೂ. ೧೨-೦೦ ;  ಬಿಡಿ ಸಂಚಿಕೆಗೆ : ೧ ರೂ.   [ಸಂಚಿಕೆ ೧೦

**ಜೂನ್-1983**

( ಶ್ರೀ ರುಧಿರೋದ್ಗಾರಿಸಂವತ್ಸರದ ಜ್ಯೇಷ್ಠ )

## ಪುರುಷವಿದ್ಯಾಸ್ತುತಿ

**ಓಂ ॥ ಉದ್ವಯಂ ತಮಸಸ್ಪರಿ ಜ್ಯೋತಿಃ ಪಶ್ಯನ್ತ ಉತ್ತರಗ್ಂ ಸ್ವಃ ಪಶ್ಯನ್ತ ಉತ್ತರಂ ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಮ್ ॥**

—ಛಾಂದೋಗ್ಯೋಪನಿಷತ್ತು ೩-೧೭-೭.

**ಭಾವಾರ್ಥ :-** ನಾವು ತಮಸ್ಸಿನ ಆಚೆಯಿರುವ ಉತ್ತರವಾದ ನಮ್ಮ ಜ್ಯೋತಿಯನ್ನು ಕಾಣುತ್ತಾ ದೇವತೆಗಳಲ್ಲಿರುವ ದೇವನಾದ ಉತ್ತಮ ಜ್ಯೋತಿಯಾದ ಸೂರ್ಯನನ್ನು ಮೇಲೇರಿ ಸೇರಿದೆವು.

[ ಪುರುಷನು ತಾನೇ ಯಜ್ಞವೆಂದು ಭಾವಿಸಿಕೊಂಡವನಾಗಿ ತನ್ನ ಆಯುಷ್ಯವನ್ನೆಲ್ಲ ಶಾಸ್ತ್ರದ ತಿಳಿವಳಿಕೆಯಂತೆ ವಿಭಾಗಿಸಿಕೊಂಡು ಆದಿತ್ಯಾದಿದೇವತೆಗಳ ರೂಪನಾದ ಪ್ರಾಣನ ಉಪಾಸನೆಯನ್ನು ಕೈಗೊಂಡರೆ ಅವನ ಪ್ರಸಾದದಿಂದ ಬ್ರಹ್ಮವನ್ನೇ ಸೇರಿ ಅಮೃತನಾಗುವನು. ಏಕೆಂದರೆ ಆದಿತ್ಯನೇ ಮೊದಲಾದ ದೇವತೆಗಳು ಪರಬ್ರಹ್ಮವೇ-ಎಂದಭಿಪ್ರಾಯ. ]

———

# ಅಧ್ಯಾತ್ಮಸಂದೇಶ

## ದೀರ್ಘಾಯುಸ್ಸಿಗಾಗಿ ಉಪಾಸನೆ

ಛಾಂದೋಗ್ಯೋಪನಿಷತ್ತಿನಲ್ಲಿ ಆರನೆಯ ಅಧ್ಯಾಯವು ಪ್ರಾರಂಭವಾಗುವವರೆಗೂ ಉಪಾಸನೆಗಳೇ ಮುಂದುವರೆಯುವವು. ಶಾಂಡಿಲ್ಯವಿದ್ಯೆಯ ಅನಂತರ ಪುತ್ರನ ದೀರ್ಘಾಯುಸ್ಸಿಗಾಗಿ ಒಂದು ಉಪಾಸನೆಯನ್ನು ಹೇಳಿದ ಬಳಿಕ ಈಗ ಮಾನವನಿಗೆ ತನ್ನ ಸ್ವಂತ ಜೀವನದಲ್ಲಿ ದೀರ್ಘಕಾಲದ ಬದುಕಿಗಾಗಿ ಒಂದು ಉಪಾಸನೆಯನ್ನು ಹೇಳಲಾರಂಭಿಸಿದ್ದಾರೆ. ಅದರ ವಿವರವನ್ನು ನೋಡೋಣ.

'ಪುರುಷನೇ ಯಜ್ಞವು'- ಎಂದು ಇದರ ಆರಂಭವು. ಮನುಷ್ಯನಿಗೆ ಹುಟ್ಟಿದಾಗಿನಿಂದ ತಾನು ಬಹುಕಾಲದವರೆಗೆ ಬದುಕಬೇಕೆಂಬ ಆಶೆಯಿದ್ದೇ ಇರುತ್ತದೆ. ಆದರೆ ಅದಕ್ಕಾಗಿ ವೈದಿಕೋಪಾಸನೆಗಳನ್ನಾಗಲೀ ಇತರ ಶಾಸ್ತ್ರೀಯಸಾಧನಗಳನ್ನಾಗಲೀ ಮಾಡಲು ಆತನು ಸಿದ್ಧನಾಗಿಲ್ಲ. ಅಷ್ಟೇ ಅಲ್ಲ. ಯಾವ ಸಾಧನವನ್ನು ಹೇಗೆ ಮಾಡಬೇಕೆಂಬುದೂ ತಿಳಿದಿರುವದಿಲ್ಲ. ಆದ್ದರಿಂದ ಶ್ರದ್ಧಾಭಕ್ತಿಯುಳ್ಳವನಾಗಿದ್ದು ದೀರ್ಘಾಯುಸ್ಸನ್ನು ಹೊಂದಲು ಇಚ್ಛೆಯುಳ್ಳವನಿಗೆ ಈಗ ಒಂದು ಉಪಾಸನೆಯನ್ನು ತಿಳಿಸಲಾಗುತ್ತದೆ. ಇಲ್ಲಿ ಮನುಷ್ಯನ ಆಯುಸ್ಸಿನ ಪರಮಾವಧಿಯನ್ನು ೧೧೬ ವರ್ಷಗಳೆಂದು ಇಟ್ಟುಕೊಂಡು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೆಯ ಭಾಗಕ್ಕೆ ೨೪ ವರ್ಷಗಳೆಂದೂ ಎರಡನೆಯ ಭಾಗಕ್ಕೆ ೪೪ ವರ್ಷಗಳೆಂದೂ ಮೂರನೆಯ ಭಾಗಕ್ಕೆ ೪೮ ವರ್ಷಗಳೆಂದೂ ಗೊತ್ತುಮಾಡಲಾಗಿದೆ. ಇವುಗಳನ್ನು ಯಜ್ಞಕರ್ಮದ ಪರಿಭಾಷೆಗೆ ಅನುಗುಣವಾಗಿ ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನವೆಂದೂ ಕರೆದಿರುತ್ತಾರೆ. ಮನುಷ್ಯನ ಆಯುಷ್ಯದ ಮೊದಲನೆಯ ೨೪ ವರ್ಷಗಳು ಪ್ರಾತಃಸವನವೆನಿಸುವದು. ಯಜ್ಞದಲ್ಲಿ ತ್ರಿಕಾಲಗಳಲ್ಲಿಯೂ ಹೋಮ, ಆಹುತಿಪ್ರದಾನಗಳಿದ್ದೇ ಇರುವವು. ಬೆಳಗಿನ ವೇಳೆಯಲ್ಲಿ ಅನುಷ್ಠಿಸುವದನ್ನು ಪ್ರಾತಃಸವನವೆನ್ನುವರು. ಹಾಗೆಯೇ ಪ್ರಾರಂಭದ ೨೪ ವರ್ಷಗಳನ್ನು ಉಪಾಸಕನು ತಾನೇ ಯಜ್ಞವೆಂದೂ ತನ್ನ ಆಯುಸ್ಸಿನ ಮೊದಲನೆಯ ಭಾಗವು ಪ್ರಾತಃಸವನವೆಂದೂ ಚಿಂತಿಸಬೇಕು. ಯಜ್ಞದಲ್ಲಿ ಪ್ರಾತಃಸವನಕ್ಕೆ ದೇವತೆಗಳಿರುವಂತೆಯೇ ಪುರುಷಯಜ್ಞದಲ್ಲಿಯೂ ಪ್ರಾಣಗಳೆಂಬ ವಸುದೇವತೆಗಳಿರುತ್ತಾರೆ. ಪ್ರಾಣಗಳನ್ನು ವಸುಗಳೆಂದು ಕರೆದಿರುವದೇಕೆಂದರೆ–ಪ್ರಾಣಗಳಿದ್ದರೇ ವಾಕ್ಕು, ಚಕ್ಷುಸ್ಸು, ಶ್ರೋತ್ರಾದಿ ಕರಣಗಳು ದೇಹದಲ್ಲಿ ವಾಸಮಾಡಿಕೊಂಡಿರುವವು. ಹೀಗೆ ವಾಗಾದಿಗಳ ವಾಸಕ್ಕೆ ಕಾರಣರಾಗಿದ್ದು ಅವುಗಳು ವಾಸಮಾಡುವಂತೆ ಪ್ರಾಣಗಳು ಏರ್ಪಡಿಸುವದರಿಂದ ಪ್ರಾಣಗಳನ್ನು ವಸುಗಳೆಂದಿದೆ. ಈ ಪ್ರಾಣದೇವತೆಗಳನ್ನು ಪ್ರತಿದಿನವೂ ಸಾಧಕನು ಬೆಳಗಿನ ವೇಳೆಯಲ್ಲಿ ಚಿಂತಿಸಬೇಕು. ಹೇಗೆಂದರೆ : 'ಪ್ರಾಣದೇವತೆಗಳಿರಾ, ನೀವು ನನ್ನ ಆಯುಸ್ಸಿನ ಮೊದಲ ಭಾಗದ ದೇವತೆಗಳಾಗಿರುವಿರಿ ; ನಿಮ್ಮ ಅನುಗ್ರಹದಿಂದ ಈ ೨೪ ವರ್ಷಗಳನ್ನು ನಾನು

ಯಾವ ಅಡ್ಡಿ ಆತಂಕಗಳಿಲ್ಲದೆ ದಾಟಲಿರುವೆನು. ನೀವು ಅನುಗ್ರಹಮಾಡಿರಿ' ಎಂದು ಕೇಳಿಕೊಳ್ಳಬೇಕು.

ಇಲ್ಲಿ ಪುರುಷನ ಆಯುಷ್ಯದ ಮೊದಲನೆಯ ಭಾಗವನ್ನು ೨೪ ವರ್ಷಗಳೆಂದು ಗೊತ್ತುಮಾಡಲು ಕಾರಣವೇನು ? ಎಂದರೆ ವೇದದಲ್ಲಿರುವ ಕೆಲವು ಮಂತ್ರಗಳಲ್ಲಿ ಗಾಯತ್ರೀ ಎಂಬ ಛಂದಸ್ಸು ಹೆಣೆದುಕೊಂಡಿದೆ. ಆ ಛಂದಸ್ಸಿಗೆ ೨೪ ಅಕ್ಷರಗಳು. ಗಾಯತ್ರೀಛಂದಸ್ಸಿನ ಬಹುಪಾಲು ಮಂತ್ರಗಳು ಯಜ್ಞದಲ್ಲಿ ಉಪಯೋಗಿಸಲ್ಪಡುತ್ತವೆ. ಈ ಸಾದೃಶ್ಯದಿಂದ ಪುರುಷಯಜ್ಞದ ಪ್ರಾತಃಸವನವನ್ನೂ ೨೪ ವರ್ಷಗಳೆಂದು ಗೊತ್ತುಮಾಡಲಾಗಿರುತ್ತದೆ. ಇದೇರೀತಿಯಾಗಿ ವೇದದಲ್ಲಿ ಮತ್ತೆ ಕೆಲವು ಮಂತ್ರಗಳು ತ್ರಿಷ್ಟುಪ್- ಎಂಬ ಛಂದಸ್ಸಿನಲ್ಲಿರುವವು. ಆ ಛಂದಸ್ಸಿಗೆ ೪೪ ಅಕ್ಷರಗಳು ನಿಗದಿಯಾಗಿರುವವು. ಆದ್ದರಿಂದ ಪುರುಷಯಜ್ಞದ ದ್ವಿತೀಯಸವನವನ್ನು ೪೪ ವರ್ಷಗಳೆಂದು ಗೊತ್ತುಪಡಿಸಿದ್ದಾರೆ. ಹೀಗೆಯೇ ಮತ್ತೆ ಕೆಲವು ಯಾಜ್ಞಿಕಮಂತ್ರಗಳು ಜಗತೀಛಂದಸ್ಸಿನಲ್ಲಿರುವವು. ಆ ಛಂದಸ್ಸು ೪೮ ಅಕ್ಷರಗಳುಳ್ಳದು. ಆದ್ದರಿಂದ ಪುರುಷಯಜ್ಞದ ತೃತೀಯಸವನವೂ ೪೮ ವರ್ಷಗಳ ಅವಧಿಯುಳ್ಳದ್ದಾಗಿರುವದು. ಈ ರೀತಿಯಾಗಿ ಯಜ್ಞದಲ್ಲಿ ಬಳಸುವ ವೇದಮಂತ್ರಗಳ ಛಂದೋಕ್ಷರಸಂಖ್ಯೆಗಳಿಗೆ ಅನುಗುಣವಾಗಿ ಪುರುಷಯಜ್ಞದ ಆಯುರ್ಭಾಗವನ್ನೂ ಗೊತ್ತುಪಡಿಸಲಾಗಿದೆ. ಮೇಲೆ ತಿಳಿಸಿದ ಮೂರು ಛಂದಸ್ಸುಗಳಲ್ಲಿಯೇ ಬಹಳಮಟ್ಟಿಗೆ ವೇದಮಂತ್ರಗಳು ಅಡಕವಾಗಿರುವವು. ಆದ್ದರಿಂದ ಏಳು ವೈದಿಕಛಂದಸ್ಸುಗಳಲ್ಲಿ ಪ್ರಧಾನವಾಗಿರುವ ಗಾಯತ್ರೀ, ತ್ರಿಷ್ಟುಪ್, ಜಗತೀ- ಎಂಬ ಮೂರನ್ನು ಸ್ವೀಕರಿಸಿ ಪುರುಷಯಜ್ಞವನ್ನು ಸಂಪಾದಿಸಲಾಗಿದೆ. ಸಂಪಾದನೆ ಎಂದರೆ ಒಂದು ಆಲಂಬನದಲ್ಲಿ ಅದಕ್ಕಿಂತ ಉತ್ಕೃಷ್ಟವಸ್ತುವಿನ ದೃಷ್ಟಿಯನ್ನು ಮಾಡುವದು- ಎಂದರ್ಥ. ಪ್ರಕೃತದಲ್ಲಿ ಪುರುಷನ ಆಯುಸ್ಸಿನಲ್ಲಿ ಯಜ್ಞದೃಷ್ಟಿಯನ್ನು ಅಳವಡಿಸಲಾಗಿದೆ. ಈ ಉಪಾಸನೆಯ ವಿವರದಂತೆ ಪುರುಷನ ಪೂರ್ಣಾಯುಸ್ಸು ೧೧೬ ವರ್ಷಗಳಾಗುತ್ತವೆ.

ಈಗ ಉಪಾಸನೆಯ ವಿವರಗಳನ್ನು ಮತ್ತಷ್ಟು ತಿಳಿಯೋಣ. ಮೊದಲನೆಯ ೨೪ ವರ್ಷಗಳಲ್ಲಿ ಏನಾದರೂ ಜ್ವರಾದಿರೋಗಗಳುಂಟಾಗಿ ಅವು ಪ್ರಾಣಾಂತಕವಾಗುವಂಥ ಸಂದರ್ಭವು ಬಂದರೆ ಆಗ ಉಪಾಸಕನು 'ಎಲೈ ಪ್ರಾಣವಸುಗಳೆ, ಈ ಸಮಯವು ನನ್ನ ಜೀವನದ ಪ್ರಾತಃಸವನವು. ಇಲ್ಲಿಂದ ನಾನು ಮಾಧ್ಯಂದಿನ ಸವನಕ್ಕೆ ಸಂಬಂಧಿಯಾಗುವಂತೆ ಮಾಡಿರಿ. ಎಂದರೆ ನನ್ನ ಜೀವನವನ್ನು ಮುಂದುವರಿಸಿರಿ. ಯಜ್ಞನಾದ ನಾನು ಪ್ರಾಣವಸುಗಳಾದ ನಿಮ್ಮೊಡನೆ-ಎಂದರೆ ನಿಮ್ಮ ಯಜಮಾನಿಕೆಯಲ್ಲಿ ನಾಶವಾಗದಂತೆ ನೋಡಿಕೊಳ್ಳಿರಿ. ಕಾಪಾಡಿರಿ'-ಎಂದು ಬೇಡಿಕೊಳ್ಳಬೇಕು. ಆಗ ಉಪಾಸಕನು ರೋಗಾದಿಗಳಿಂದ ಬಿಡಲ್ಪಟ್ಟವನಾಗುವನು; ಮತ್ತು ಪ್ರಾಣವಸುದೇವತೆಗಳ ದಯೆಯಿಂದ ಮುಂದಿನ ಸವನಾಯುಷ್ಯವನ್ನು ತಲುಪುವನು. ಇದೊಂದು ವೈದಿಕವಾದ ಉಪಾಸನೆಯು. ಆದರೂ ಯಾರೇ ಆಗಲಿ- ಹೀಗೆ ಜ್ವರಾದಿರೋಗಗಳು ಬಂದು ಹಾಸಿಗೆಯಲ್ಲಿ ಮಲಗಿದಾಗ ಪ್ರಾಣದೇವತೆಗಳನ್ನು

ಪ್ರಾರ್ಥಿಸಬೇಕು. ಆ ಸಮಯಕ್ಕೆ ಪೂರ್ಣವಾಗಿ ಬಿಡುವಿರುವದರಿಂದ ಮನಸ್ಸಿನಲ್ಲಿ ದೇವತೆಗಳ ಚಿಂತನೆಯನ್ನು ಮಾಡಲು ಸಾಧ್ಯವಿದೆ. ಜೊತೆಗೆ ಅಗ್ಗಿ ಆಹಾರಾದಿಗಳೂ ಸೇರುವದಿಲ್ಲವಾದ್ದರಿಂದ ಉಪವಾಸವನ್ನೂ ಆಚರಿಸಿದಂತಾಗುವದು. ಮೈಯಲ್ಲಿ ಉಂಟಾಗುವ ತಾಪ, ನೋವು- ಮುಂತಾದವುಗಳು ತಪಸ್ಸೆನಿಸುವವು. ಹೀಗೆ ರೋಗಾದಿಗಳು ಸಂಭವಿಸಿದಾಗಲೂ ಕಾಲವನ್ನು ವ್ಯರ್ಥಮಾಡದೆ ಭಗವಚ್ಚಿಂತನೆಗೆ ಅಳವಡಿಸಿಕೊಳ್ಳಬೇಕು. ಆದರೆ ಆರೋಗ್ಯವಾಗಿರುವಾಗಲೇ ಉಪಾಸನೆಯು ಕಷ್ಟ ಸಾಧ್ಯವಾಗಿರುವಲ್ಲಿ ರೋಗವುಂಟಾದಾಗ ಇದು ಹೇಗೆ ಸಾಧ್ಯ? ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರವೇನೆಂದರೆ: ಆರೋಗ್ಯವಾಗಿರುವಾಗಲೇ ಪರಮಾತ್ಮನ ಚಿಂತನೆಯನ್ನು ಅಭ್ಯಾಸಮಾಡಿಕೊಂಡಿದ್ದವನಿಗೆ ರೋಗವುಂಟಾದಾಗಲೂ ಅಂಥವನು ಶರೀರವನ್ನು ನಿರ್ಲಕ್ಷಿಸಿ ಉಪಾಸನೆಯನ್ನು ಮಾಡಬಹುದು. ಉದಾಹರಣೆಗೆ: ಭೀಷ್ಮಾಚಾರ್ಯರು ಶರಪಂಜರದಲ್ಲಿ ಮಲಗಿದ್ದಾಗಲೂ ಭಗವಂತನನ್ನು ಚಿಂತಿಸುತ್ತಲೇ ಇದ್ದರಲ್ಲವೆ? ಹಾಗೆಯೇ ಅಭ್ಯಾಸಬಲದಿಂದ ಎಲ್ಲವೂ ಸಾಧ್ಯವೆಂದು ತಿಳಿಯಬೇಕು.

ಈಗ ಎರಡನೆಯ ಸವನವನ್ನು ವಿಚಾರಮಾಡೋಣ. ಈ ಸವನಕ್ಕೆ ೪೪ ವರ್ಷಗಳೆಂದು ಈಗಾಗಲೆ ತಿಳಿಸಿದ್ದಾಗಿದೆ. ಇಂಥ ವಯಸ್ಸಿನಲ್ಲಿಯೂ ರೋಗಾದಿಗಳು ಸಂಭವಿಸಬಹುದು. ಆಗ ರುದ್ರದೇವತೆಗಳನ್ನು ನೆನೆಯಬೇಕು. ಪ್ರಾಣದೇವತೆಗಳೇ ರುದ್ರರೆಂದೂ ವ್ಯವಹರಿಸಲ್ಪಟ್ಟಿದ್ದಾರೆ. ಏಕೆಂದರೆ ಅವರು ಮನುಷ್ಯನನ್ನು ಅಳುವಂತೆಯೂ ಮಾಡಬಲ್ಲರು. ಪ್ರಸನ್ನರಾದರೆ ಅಳುವನ್ನು ಓಡಿಸಲೂ ಬಲ್ಲರು. ಆದ್ದರಿಂದ ಎರಡನೆಯ ಸವನದ ಈ ಅವಧಿಯಲ್ಲಿ ಪ್ರಾಣಗಳನ್ನು ರುದ್ರರೆಂದು ಚಿಂತಿಸುತ್ತಾ ಹಿಂದೆ ತಿಳಿಸಿದಂತೆಯೇ ಪ್ರಾರ್ಥಿಸಿಕೊಳ್ಳಬೇಕು. 'ರುದ್ರರುಗಳಿರಾ, ನಾನು ವಿಚ್ಛೇದವಿಲ್ಲದೆ ಮೂರನೆಯ ಸವನವನ್ನು ತಲುಪುವಂತೆ ನೀವು ಆಯುಷ್ಯವನ್ನು ದಯಪಾಲಿಸಿರಿ' ಎಂದು ಬೇಡಿಕೊಳ್ಳಬೇಕು. ಇದು ಪುರುಷಯಜ್ಞದ ದ್ವಿತೀಯಸವನವೆನಿಸುವದು.

ಇನ್ನು ಮೂರನೆಯ ಸವನದಲ್ಲಿ ಜೀವನದ ಕಡೆಯ ೪೮ ವರ್ಷಗಳು ಬಂದೊದಗುವವು. ಆ ಕಾಲಕ್ಕೆ ಆದಿತ್ಯರು ಒಡೆಯರು. ಆದಿತ್ಯರೆಂದರೂ ಪ್ರಾಣಗಳೇ. 'ಆದದತೇ ಇತ್ಯಾದಿತ್ಯಾಃ' ಎಂಬರ್ಥದಲ್ಲಿ ಪ್ರಾಣಗಳು ಶಬ್ದಾದಿಗಳನ್ನು ಸ್ವೀಕರಿಸುವರಾದ್ದರಿಂದ ಆದಿತ್ಯರೆಂದು ಕರೆಯಲ್ಪಡುವರು. ತೃತೀಯಸವನದೇವತೆಗಳಾದ ಇವರನ್ನು ಕಡೆಯ ಪರ್ಯಾಯದ ಆಯುಷ್ಯದಲ್ಲಿ ಉಪಾಸನೆಮಾಡಬೇಕು. ಹಿಂದಿನಂತೆಯೇ ಈ ಅವಧಿಯಲ್ಲಿಯೂ ರೋಗಾದಿಗಳುಂಟಾದಾಗ 'ಎಲೈ ಪ್ರಾಣಾದಿತ್ಯರುಗಳೆ, ನನ್ನ ಈ ತೃತೀಯಸವನವು ವಿಚ್ಛೇದವಾಗದಂತೆ ನಡೆಯಿಸಿಕೊಡಿರಿ' ಎಂದು ಪ್ರಾರ್ಥಿಸಿಕೊಳ್ಳಬೇಕು. ಅಂತೂ ವಸುರುದ್ರಾದಿತ್ಯರೂಪರಾದ ಪ್ರಾಣಗಳು ಮಾನವನ ದೀರ್ಘಾಯುಷ್ಯದ ಯಜಮಾನರುಗಳು- ಎಂದರ್ಥ.

ಈಗ ಈ ಪುರುಷಯಜ್ಞದ ಒಟ್ಟು ತಾತ್ಪರ್ಯವನ್ನು ತಿಳಿಯೋಣ. ೧೧೬ ವರ್ಷಗಳ ಆಯುಷ್ಯವು ನಿಜವಾಗಿಯೂ ಒಬ್ಬ ಮಾನವನಿಗೆ ಪ್ರಾಪ್ತಿಯಾಯಿತೆಂದರೆ ಅದೊಂದು ಹೆಚ್ಚುಗಾರಿಕೆಯೇ ಸರಿ. ಆದರೆ ರಷ್ಯಾದೇಶದಲ್ಲಿಯೋ ಅಮೇರಿಕಾದೇಶದಲ್ಲಿಯೋ ನಾವಿದ್ದುಕೊಂಡು ಈ ಆಯುಃಪ್ರಮಾಣವನ್ನು ಪಡೆದರೂ ಪ್ರಯೋಜವಿಲ್ಲ. ಆದ್ದರಿಂದಲೇ ಭಾರತದೇಶದಲ್ಲಿಯೇ ಇದ್ದರೂ ಪುರುಷಯಜ್ಞೋಪಾಸನೆಯ ರಹಸ್ಯವು ತಿಳಿಯದವರಿಗೂ ಇದು ವ್ಯರ್ಥವೇ ಸರಿ. ಹೀಗಿರುವದರಿಂದ ನಾವು ನೇರಾಗಿ ವೇದವಾಕ್ಯಗಳ ಮೂಲಕ ಈ ಉಪಾಸನೆಯನ್ನೂ ಮಂತ್ರಗಳನ್ನೂ ಗ್ರಹಿಸುವ ಅಧಿಕಾರವುಳ್ಳವರಾಗಿದ್ದಲ್ಲಿ ಅವಶ್ಯವಾಗಿ ಪಡೆದುಕೊಳ್ಳಬೇಕು. ಹಾಗಿಲ್ಲವಾದರೆ ಈ ಯಜ್ಞದ ಅಭಿಪ್ರಾಯವನ್ನಾದರೂ ಮನನಮಾಡಬೇಕು. ಅನೇಕ ರೋಗಿಗಳಿಗೆ ಇದರಿಂದ ಉಪಯೋಗವಾಗಬಹುದಾದರೂ ಶಾಸ್ತ್ರಸಂಸ್ಕಾರವಿಲ್ಲದವರಿಗೆ ಈ ಉಪಾಸನೆಯು ಹಿಡಿಸಲಾರದು. ನಿಜವಾಗಿ ನೋಡಿದರೆ ಪ್ರಾಣವೆಂಬುದು ಯಾವ ಜಾತಿಲಿಂಗಮತಗಳಿಗೂ ಸೇರಿದ್ದಲ್ಲ. ಆ ಪ್ರಾಣವು ಸರ್ವಸಾಧಾರಣವಾಗಿರುವದು. ಅದರ ಮಹಿಮೆಯನ್ನರಿಯಲು ಯಾರಿಗೂ ಯಾವ ಅಡ್ಡಿಯೂ ಇರುವದಿಲ್ಲ. ಪ್ರಾಣಗಳು ವಸುರುದ್ರಾದಿತ್ಯರೆನಿಸಿ ಪ್ರತಿಯೊಬ್ಬ ಮಾನವನ ಆಯುಸ್ಸನ್ನೂ ವ್ಯಾಪಿಸಿರುವರೆಂಬ ಉದಾತ್ತಭಾವನೆಯು ನಮಗೆ ಬಂದದ್ದೇ ಆದರೆ ನಾವು ನಿಜವಾಗಿಯೂ ಉದ್ಧಾರವಾದೇವು.

ಈಗ ಉಪಾಸನೆಯ ಫಲವನ್ನು ಕೇಳೋಣ. ಮಹಿದಾಸ ಐತರೇಯನೆಂಬ ಋಷಿಯು ಈ ಉಪಾಸನೆಯನ್ನು ಕೈಗೊಂಡಿದ್ದನಂತೆ. ಅವನು ತನಗೆ ರೋಗಗಳುಂಟಾದಾಗಲೆಲ್ಲ "ಎಲೈ ರೋಗವೆ, ಹೀಗೇಕೆ ನನ್ನನ್ನು ಪೀಡಿಸುತ್ತಿದ್ದೀಯೆ? ನನ್ನನ್ನೇಕೆ ಸಂಕಟಗೊಳಿಸುವೆ? ನಾನು ಪುರುಷಯಜ್ಞೋಪಾಸಕನಾಗಿರುವೆನು. ಪ್ರಾಣದೇವತೆಯ ಕೃಪೆಯು ನನ್ನ ಮೇಲಿದೆ. ನೀನು ಮಾಡುವ ಉಪತಾಪ (ತೊಂದರೆ)ಯಿಂದ ನಾನು ಸಾಯುವದಿಲ್ಲ; ನಿನ್ನ ಶ್ರಮವು ವ್ಯರ್ಥ" ಎಂದು ನುಡಿದನಂತೆ. ಇದರಿಂದ ಅವನ ರೋಗಾದಿಗಳೆಲ್ಲವೂ ಹಿಮ್ಮೆಟ್ಟಿದವುಗಳಾಗಿ ಅವನು ೧೧೬ ವರ್ಷಗಳು ಬದುಕಿದ್ದನಂತೆ. ಹೀಗೆ ಈ ಉಪಾಸನೆಗೆ ಪ್ರತ್ಯಕ್ಷಫಲವನ್ನೂ ತಿಳಿಸಲಾಗಿದೆ.

ಈಗ ಉಪನಿಷತ್ತಿನಲ್ಲಿ ಈ ಪುರುಷಯಜ್ಞೋಪಾಸನೆಯ ಕಡೆಯಲ್ಲಿ ಕೊಟ್ಟಿರುವ ಎರಡು ಋಕ್ಕುಗಳ ಅಭಿಪ್ರಾಯವನ್ನು ಮನನಮಾಡೋಣ. 'ಉದ್ವಯಮ್' ಎಂಬ ಒಂದು ಋಕ್ಕನ್ನು ಮುಖಪುಟದಲ್ಲಿ ಕೊಡಲಾಗಿದೆ. ಈ ಮಂತ್ರವನ್ನು ಸ್ವಲ್ಪ ಬದಲಾವಣೆಯೊಡನೆ ಯಜುರ್ವೇದಿಗಳು ಮಾಧ್ಯಾಹ್ನಿಕಸಂಧ್ಯಾಕಾಲಕ್ಕೆ ಪಠಿಸುತ್ತಾರೆ. ಇದು ಸೂರ್ಯನ ಸ್ತೋತ್ರರೂಪವಾಗಿದ್ದು ಪರಬ್ರಹ್ಮಕ್ಕೂ ಅನ್ವಯಿಸುವಂತಿದೆ. ಅಜ್ಞಾನನಾಶಕವಾದ ಆತ್ಮಜ್ಯೋತಿಯನ್ನು ಕಂಡುಕೊಂಡವರು ಧನ್ಯರು –ಎಂದು ಇದರ ಅಭಿಪ್ರಾಯ. "ಈ ಜ್ಯೋತಿಯು ಕತ್ತಲೆಯ ಆಚೆಗೆ ಇರುವದು. ಹಾಗೂ ಕತ್ತಲೆಯನ್ನು ನಾಶಗೊಳಿಸತಕ್ಕದ್ದೂ ಆಗಿದೆ. ಉತ್ಕೃಷ್ಟತರವಾಗಿದ್ದು

ಕೊಂಡು ಅಥವಾ ಎಲ್ಲಕ್ಕೂ ಮೇಲಿದ್ದುಕೊಂಡು ಬೆಳಗುತ್ತಿರುವ ಈ ಜ್ಯೋತಿಯನ್ನು ಉಪಾಸನೆಯಿಂದ ನಾವು ಸೇರಿರುತ್ತೇವೆ. ಸರ್ವದೇವತೆಗಳಲ್ಲಿಯೂ ಇರುವ ಸೂರ್ಯನೆಂಬ ಹೆಸರಿನ ಈ ಪ್ರಾಣಜ್ಯೋತಿಯನ್ನು ನಾವು ಚಿಂತಿಸುವೆವು. ರಶ್ಮಿಗಳನ್ನೂ ಜೀವರುಗಳೆಲ್ಲರ ಪ್ರಾಣಗಳನ್ನೂ ಪ್ರೇರಿಸುವದರಿಂದ ಇದು ಸೂರ್ಯನೆನಿಸಿರುವದು; ಇಂಥ ಅತ್ಯುತ್ತಮವಾದ ಪರಂಜ್ಯೋತಿಯನ್ನು ನಾವು ಸೇರಿಕೊಂಡೆವು" ಎಂದು ಈ ಋಕ್ಕಿನ ಅಭಿಪ್ರಾಯವು.

ಮತ್ತೊಂದು ಋಕ್ಕು ಋಗ್ವೇದದ ಸಂಹಿತಾಭಾಗದಲ್ಲಿ ೮-೨-೬-೩೦ ರಲ್ಲಿ ಇದೆ. **"ಆದಿತ್ಪ್ರತ್ನಸ್ಯ ರೇತಸೋ ಜ್ಯೋತಿಃ ಪಶ್ಯನ್ತಿ ವಾಸರಮ್ । ಪರೋ ಯದಿಧ್ಯತೇ ದಿವಿ"** ಎಂದು ಇದರ ಪೂರ್ಣಪಾಠ. ಹಿಂದಿನ ಋಕ್ಕನ್ನೂ ಈ ಋಕ್ಕನ್ನೂ ಪುರುಷಯಜ್ಞದ ಕಡೆಯಲ್ಲಿ ವಿದ್ಯಾಸ್ತುತಿಗಾಗಿ ಕೊಡಲಾಗಿದೆ. ಇರಲಿ. "ಚಿರಂತನವಾದ ಹಳೆಯದಾದ ರೇತಸ್ಸಿನ ಎಂದರೆ ಪ್ರಪಂಚಬೀಜದ ಕಾರಣವಾದ ಸತ್ತೆಂಬ ಜ್ಯೋತಿಯನ್ನು ಉಪಾಸಕರು ಕಾಣುತ್ತಾರೆ- ಎಂದರೆ ಬಲ್ಲವರಾಗಿರುತ್ತಾರೆ. ಹೇಗೆಂದರೆ : ಬ್ರಹ್ಮಚರ್ಯವೇ ಮುಂತಾದ ನಿವೃತ್ತಿಸಾಧನಗಳಿಂದ ಶುದ್ಧವಾದ ಅಂತಃಕರಣವುಳ್ಳವರಾಗಿ ಜ್ಯೋತಿಯ ಸಾಕ್ಷಾತ್ಕಾರವನ್ನು ಹೊಂದಿರುತ್ತಾರೆ. ಆ ಜ್ಯೋತಿಯು ದ್ಯುಲೋಕದಲ್ಲಿ ಎಂದರೆ ಪರಬ್ರಹ್ಮದಲ್ಲಿದ್ದುಕೊಂಡು ಹತ್ತಿ ಉರಿಯುತ್ತಿರುವದು" ಎಂದು ಈ ಋಕ್ಕಿನ ತಾತ್ಪರ್ಯ. ಇಲ್ಲಿ 'ಇಧ್ಯತೇ' ಎಂಬುದರ ಅಕ್ಷರಾರ್ಥವನ್ನು ಹೀಗೆ ಸಮನ್ವಯಮಾಡಿಕೊಳ್ಳಬೇಕು. ಸೂರ್ಯಚಂದ್ರಾದಿಗಳ ರೂಪದಿಂದ ಹೊಳೆಯುತ್ತಿರುವ ತೇಜಸ್ಸು ಪರಬ್ರಹ್ಮವೇ. ಅದು ಬೆಳಕುಗಳಿಗೆಲ್ಲ ಬೆಳಕಾಗಿರುವದು. ಅಮೃತವಾಗಿರುವದು. ಆದ್ದರಿಂದ ಅದನ್ನು ಸೂರ್ಯಾದ್ಯುಪಾಧಿಗಳ ಮೂಲಕ ಚಿಂತಿಸುವವನು ತಾನೂ ಸಂಸಾರಧರ್ಮಗಳನ್ನು ಮೀರಿ ನೆಲೆನಿಲ್ಲುವವನು. ಅದು ನಕ್ಷತ್ರಗ್ರಹತಾರೆಗಳನ್ನೆಲ್ಲ ವ್ಯಾಪಿಸಿಕೊಂಡಿರುವದು. ಇದು ಜಗತ್ತಿನ ಮೂಲಬೆಳಕಾಗಿದ್ದು ಜೀವರುಗಳ ಆಯುಸ್ಸಿನ ರೂಪವಾಗಿರುವ ಬ್ರಹ್ಮವೆನಿಸಿ ಅನುಭವಿಗಳಿಗೆ ಗೋಚರವಾಗಿರುತ್ತದೆ- ಎಂದು ತಿಳಿಯಬೇಕು.

ಈಗಿನ ವಿಜ್ಞಾನಯುಗದಲ್ಲಿ ಬಹಳಮಟ್ಟಿಗೆ ಎಲ್ಲರಿಗೂ ಒಂದಲ್ಲ ಒಂದು ರೀತಿಯ ಶಾರೀರಕತಾಪಗಳೂ ರೋಗಗಳೂ ಅಂಟಿಕೊಂಡೇ ಇವೆ. ಆದ್ದರಿಂದ ಸ್ತ್ರೀಯರಾಗಲಿ, ಪುರುಷರಾಗಲಿ- ಯಾರಾದರೂ ಸರಿ- ರೋಗಗಳ ಪರಿಹಾರಕ್ಕಾಗಿ ಈ ಪುರುಷಯಜ್ಞವನ್ನು ಕೈಗೊಳ್ಳಬಹುದಾಗಿದೆ. ಇದು ಉಪಾಸನೆಯಾದ್ದರಿಂದ ಮಾನಸಿಕದಾರ್ಢ್ಯವು ಬಹು ಮುಖ್ಯ. ಅದನ್ನು ಮತ್ತೆ ಭಗವಚ್ಚಿಂತನೆಯಿಂದಲೇ ಪಡೆದುಕೊಳ್ಳಬೇಕು. ಸದ್ಯಕ್ಕೆ ರೋಗಿಗಳೆಲ್ಲರೂ ಈ ಉಪಾಸನೆಯ ಸ್ಥಾನದಲ್ಲಿ ಈ ಪದ್ಯವನ್ನು ಪಠಿಸಬಹುದು. "ಶರೀರೇ ಜರ್ಝರೀಭೂತೇ ವ್ಯಾಧಿಗ್ರಸ್ತೇ ಕಳೇಬರೇ । ಔಷಧಂ ಜಾಹ್ನವೀತೋಯಂ ವೈದ್ಯೋ ನಾರಾಯಣೋ ಹರಿಃ" ಈ ಮಂತ್ರಪಠನವನ್ನು ಸದ್ಯಕ್ಕೆ ಜಾರಿಗೆ ತರೋಣ.

---

# ಸಾಮಾನ್ಯನೀತಿ

**ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ।**
**ಉತ್ಪಥಪ್ರತಿಪನ್ನಸ್ಯ ನ್ಯಾಯ್ಯಂ ಭವತಿ ಶಾಸನಮ್ ॥೧॥**

೧. ಅಹಂಕಾರಿಯಾಗಿದ್ದು ಕರ್ತವ್ಯಾಕರ್ತವ್ಯಗಳನ್ನು ಅರಿಯದೆ ಇರುವ, ಹಾಗೂ ಅಡ್ಡದಾರಿಯನ್ನು ಹಿಡಿದವನು ಗುರುವೇ ಆಗಿರಲಿ, ಅವನಿಗೆ ಶಿಕ್ಷೆಯು ನ್ಯಾಯವಾಗಿರುತ್ತದೆ.

**ಮನಸೈವ ಕೃತಂ ಪಾಪಂ ನ ಶರೀರಕೃತಂ ಕೃತಮ್ ।**
**ಯೇನೈವಾಲಿಂಗಿತಾ ಕಾಂತಾ ತೇನೈವಾಲಿಂಗಿತಾ ಸುತಾ ॥೨॥**

೨. ಮನಸ್ಸಿನಿಂದ ಮಾಡಿದ ಪಾಪವೇ ನಿಜವಾದ ಪಾಪವು. ಶರೀರಮಾತ್ರದಿಂದ ಆದದ್ದಲ್ಲ. ಏಕೆಂದರೆ ಹೆಂಡತಿಯನ್ನು ಅಪ್ಪಿಕೊಂಡಂತೆಯೇ ಅದೇ ಶರೀರದಿಂದ ಮಗಳನ್ನೂ ಮುದ್ದಿಸುತ್ತೇವೆಯಲ್ಲವೆ? (ಭಾವನೆಯೇ ಪಾಪ- ಪುಣ್ಯಗಳಿಗೆ ನಿಮಿತ್ತವಾಗಿರುವದು-ಎಂದಭಿಪ್ರಾಯ.)

**ದೇಶಾನುತ್ಸೃಜ್ಯ ಗಚ್ಛನ್ತಿ ಸಿಂಹಾಃ ಸತ್ಪುರುಷಾಃ ಗಜಾಃ ।**
**ತತ್ರೈವ ನಿಧನಂ ಯಾಂತಿ ಕಾಕಾಃ ಕಾಪುರುಷಾ ಮೃಗಾಃ ॥ ೩ ॥**

೩. (ಜೀವನೋಪಾಯವು ದುಸ್ತರವಾದಾಗ) ಸಿಂಹಗಳೂ ಸತ್ಪುರುಷರೂ ಆನೆಗಳೂ ಜಾಗವನ್ನು ಬಿಟ್ಟು ಹೊರಟುಬಿಡುವವು. ಆದರೆ ಕಾಗೆಗಳು, ಹೇಡಿಗಳು, (ಅಲ್ಪಬುದ್ಧಿಯ ಜನರು) ಪಶುಗಳು ಅಲ್ಲಿಯೇ ಇದ್ದು ನಾಶಹೊಂದುವರು.

**ವಾಗ್ವಾದಮರ್ಥಸಂಬಂಧಂ ಪರೋಕ್ಷೇ ದಾರದರ್ಶನಮ್ ।**
**ಯದೀಚ್ಛೇದ್ ವಿಪುಲಾಂ ಪ್ರೀತಿಂ ತ್ರೀಣಿ ತತ್ರ ನ ಕಾರಯೇತ್ ॥ ೪ ॥**

೪. ಯಾರೊಡನೆಯಾದರೂ ಹೆಚ್ಚಿನ ಸ್ನೇಹವನ್ನು ಕಾಪಾಡಿಕೊಳ್ಳುವ ಆಶೆಯಿದ್ದರೆ ಅಂಥವರೊಡನೆ ವಾದಮಾಡುವದನ್ನಾಗಲಿ, ಹಣಕಾಸಿನ ವ್ಯವಹಾರ ಮಾಡುವದನ್ನಾಗಲಿ, ಅವರ ಪತ್ನಿಯನ್ನು ಆವರಿಗೆ ಗೊತ್ತಿಲ್ಲದಂತೆ ಭೇಟಿಮಾಡುವದನ್ನಾಗಲಿ ಮಾಡಬಾರದು.

**ಅರ್ಥಾನಾಮಾರ್ಜನಂ ಕಾರ್ಯಂ ವರ್ಧನಂ ರಕ್ಷಣಂ ತಥಾ ।**
**ಭಕ್ಷ್ಯಮಾಣೋ ನಿರಾದಾಯಃ ಸುಮೇರುರಪಿ ಹೀಯತೇ ॥೫॥**

೫. ಹಣದ ಸಂಪಾದನೆ, ರಕ್ಷಣೆ, ಬೆಳವಣಿಗೆಗಳನ್ನು (ಜಾಣಸು) ಮಾಡಬೇಕು. ಹಾಗಿಲ್ಲದೆ ಸುಮ್ಮನೆ ಕೂತು ತಿಂದರೆ ಮೇರುಪರ್ವತವೂ ಬರಿದಾಗುವದು.

**ಯುಧ್ಯಂತಿ ಪಶವಃ ಸರ್ವೇ ಪಠಂತಿ ಶುಕಸಾರಿಕಾಃ ।**
**ದಾತುಂ ಜಾನಾತಿ ಯೋ ವಿತ್ತಂ ಸ ಶೂರಃ ಸ ಚ ಪಂಡಿತಃ ॥೬॥**

೬. ದನಗಳೂ ಗುದ್ದಾಡುತ್ತವೆ. ಗಿಳಿಗಳೂ ಮಾತನಾಡುತ್ತವೆ. ಆದರೇನು? ಅವುಗಳು ಶೂರರೆಂದೂ ಪಂಡಿತರೆಂದೂ ಕರೆಯಿಸಿಕೊಳ್ಳಲಾರವು. ಆದ್ದರಿಂದ ಹಣವನ್ನು ಸರಿಯಾದ ಪಾತ್ರದಲ್ಲಿ ದಾನಮಾಡುವವನೇ ಶೂರನು. ಅವನೇ ಪಂಡಿತನು.

# ಸತ್ಯಕಾಮನ ಪತ್ರಗಳು

## ವೇದಾಂತಸಿದ್ಧಾಂತ

"ನಾನೊಬ್ಬ ಡಾಕ್ಟರನಾಗಿರುತ್ತೇನೆ. ತತ್ತ್ವವಿಚಾರದಲ್ಲಿ ಕುತೂಹಲವುಳ್ಳ ನಾನು ಈಚೆಗೆ 'ವೇದಾಂತಸಿದ್ಧಾಂತ'ವೆಂಬ ಗ್ರಂಥವನ್ನು ಕೊಂಡು ಓದಲಾರಂಭಿಸಿದೆನು. ಅದೇಕೋ, ನನಗೆ ಏನೂ ಅರ್ಥವಾಗಲಿಲ್ಲ- ಅದರಲ್ಲಿ ಒಂದು ಕಡೆ ಕೆಲವು ವೇದಾಂತಗ್ರಂಥಗಳ ಪರಿಚಯವನ್ನು ನೀಡಿ ಅವುಗಳು ಶಾಸ್ತ್ರೀಯಗ್ರಂಥಗಳಾಗಿದ್ದು ಪಾರಿಭಾಷಿಕಶಬ್ದಪೂರ್ಣಗಳೂ ತರ್ಕಜಟಿಲಗಳೂ ಆಗಿರುವದರಿಂದ ಅವುಗಳನ್ನು ತಿಳಿದುಕೊಳ್ಳುವದಕ್ಕೆ ಗೀರ್ವಾಣವಾಣಿಯ ಪೂರ್ಣಪರಿಚಯವೂ ಸಾಹಿತ್ಯ, ವ್ಯಾಕರಣ, ನ್ಯಾಯ, ಮೀಮಾಂಸಾಶಾಸ್ತ್ರಗಳ ವಿಶೇಷಪಾಂಡಿತ್ಯವೂ ಅತ್ಯವಶ್ಯವೆಂದೂ ತಿಳಿಸಲಾಗಿತ್ತು. ನಾನು ಈವರೆಗೂ ವೇದಾಂತವು ಸುಲಭವೆಂದೇ ತಿಳಿದಿದ್ದೆನು. ಇನ್ನುಮೇಲೆ ಯಾವ ವೇದಾಂತಗ್ರಂಥಗಳನ್ನೂ ಓದಿ ಉಪಯೋಗವಿಲ್ಲವೆಂದು ನಿರ್ಧರಿಸಿ ನಾನು ಕೊಂಡಿದ್ದ ಪುಸ್ತಕವನ್ನೂ ತಮಗೇ ಒಪ್ಪಿಸಿದ್ದೇನೆ. ನನ್ನ ತತ್ತ್ವವಿಚಾರಕುತೂಹಲಕ್ಕೆ ತಾವೇನಾದರೂ ಮಾರ್ಗದರ್ಶನಮಾಡುವಿರಾ?" ಎಂದು ಕೇಳಿ ನೀವು ಬರೆದಿರುವ ಪತ್ರವು ಬಂದಿದೆ. ಪುಸ್ತಕವೂ ನನಗೆ ಕೈಸೇರಿದೆ.

ನೀವು ಕಳುಹಿಸಿರುವ ಪುಸ್ತಕವು ನನ್ನಂಥವನಿಗೆ ಒಳ್ಳೆಯ ಆಹಾರವಾಗಿದೆ. ಅದರಲ್ಲಿ ಅನೇಕ ಅಮೋಘವಿಷಯಗಳಿವೆ. ವಿದ್ವಾಂಸರುಗಳೂ ಮಠಾಧಿಪತಿಗಳೂ ಕೆಲವು ಜಿಜ್ಞಾಸುಗಳೂ ಅದನ್ನು ಮೆಚ್ಚಿ ತಮ್ಮ ಸಂತೋಷವನ್ನು ಸೂಚಿಸಿದ್ದಾರೆ. ಒಬ್ಬಿಬ್ಬರು ಸ್ವಾಭಿಪ್ರಾಯಗಳನ್ನೂ ಪ್ರಕಟಿಸಿದ್ದಾರೆ. ಒಟ್ಟಿನಲ್ಲಿ ಗ್ರಂಥಕರ್ತರು ಮಹಾವಿದ್ವಾಂಸರೂ ಪ್ರಾಚೀನಸಂಪ್ರದಾಯದಂತೆ ವೇದಾಂತದರ್ಶನವನ್ನು ಅಧ್ಯಯನ ಮಾಡಿರುವ ಮಹಾಪಂಡಿತರೂ ಬರಹಗಾರರೂ ಆಗಿದ್ದಾರೆ. ಅವರು ತಮ್ಮ ಅಧ್ಯಯನಚಿಂತನಗಳಿಗೆ ತಕ್ಕ ದೃಷ್ಟಿಕೋನವನ್ನವಲಂಬಿಸಿ ವಿಷಯಪ್ರತಿಪಾದನೆಯನ್ನು ಮಾಡಿದ್ದಾರೆ. ಇದೆಲ್ಲವೂ ಸಾಮಾನ್ಯವಿಷಯಗಳೇನಲ್ಲ. 'ವಿದ್ವಾನೇವ ವಿಜಾನಾತಿ ವಿದ್ವಜ್ಜನಪರಿಶ್ರಮಮ್' ಎಂದಂತೆ ಆ ಮಹನೀಯರ ಶ್ರಮವು ನಿಜವಾಗಿಯೂ ವಿದ್ವಜ್ಜನರಿಗೆ ಮಾತ್ರವೇ ಅರ್ಥವಾಗುವಂತಿದೆ. ಹೀಗಿರುವಲ್ಲಿ ಸಾಮಾನ್ಯಜಿಜ್ಞಾಸುಗಳಾದ ನಿಮಗೆ ಅದು ರುಚಿಯನ್ನುಂಟುಮಾಡದೆ ಹೋಗಿದ್ದರೆ ಆಶ್ಚರ್ಯವೇನಿಲ್ಲ. ಆ ಮಹಾಗ್ರಂಥದಲ್ಲಿ-ಸಂಜೀವಿನೀಬೆಟ್ಟದಲ್ಲಿ ಎಲ್ಲಾ ಗಿಡಮೂಲಿಕೆಗಳೂ ಇರುವಂತೆ-ವೇದಪ್ರಾಮಾಣ್ಯ, ಪರಮತಖಂಡನ, ಸಾಮಾಜಿಕರಾಜಕೀಯ ಸಮಸ್ಯೆಗಳ ವಿಮರ್ಶೆ, ಮತಧರ್ಮಸದಾಚಾರಗಳ ಶ್ರೇಷ್ಠತೆ–ಹೀಗೆ ಎಲ್ಲಾ ವಿಷಯಗಳೂ ತುಂಬಿತುಳುಕುತ್ತಿವೆ. ಅದರಲ್ಲಿ ನಿಮಗೆ ಬೇಕಾದದ್ದನ್ನು ಹುಡುಕಿ ತೆಗೆಯುವದು ಮಹಾಸಾಹಸದ ಕೆಲಸವೇ ಸರಿ.

ಶ್ರೀಶಂಕರಾಚಾರ್ಯರ ವಿಚಾರಸರಣಿಯಂತೆ ವೇದಾಂತಜ್ಞಾನವು ನೀವು ಭಾವಿಸಿರುವಂತೆಯೇ ಸುಲಭವಾಗಿರುತ್ತದೆ. ಭಗವಂತನೂ ಅದನ್ನು 'ಸುಸುಖಮ್'

ಎಂದೇ ಗೀತೆಯಲ್ಲಿ ಹೊಗಳಿರುತ್ತಾನೆ. ಆದರೆ ಆಚಾರ್ಯರಿಂದ ಈಚಿನ ವೇದಾಂತಿಗಳು ಹೆಚ್ಚುಹೆಚ್ಚಾಗಿ ದ್ವೈತಾದಿಮತಗಳ ಖಂಡನೆ, ತರ್ಕಶಾಸ್ತ್ರದವರಂತೆ ಲಕ್ಷಣಪ್ರಮಾಣಗಳಿಂದ ವಸ್ತುಸಿದ್ಧಿಯನ್ನು ಮಾಡಲು ಹೊರಟದ್ದು, ಔಪನಿಷದಪುರುಷನು ಅನನ್ಯಶೇಷನೂ ಸ್ವತಃಸಿದ್ಧನೂ ಆಗಿರುವನೆಂಬುದನ್ನೂ ಅದ್ವೈತವು ಅಜಾತಿವಾದ, ಅವಸ್ಥಾತ್ರಯಗಳ ಮೂಲಕ ಅನುಭವಾರೂಢವಾಗುವದೆಂಬುದನ್ನೂ ಮರೆತದ್ದು, 'ಅಧ್ಯಾರೋಪಾಪವಾದ'ವೆಂಬ ಸಾಂಪ್ರದಾಯಿಕಪ್ರಕ್ರಿಯೆಯನ್ನು ಅಸಡ್ಡೆಮಾಡಿದ್ದು –ಈ ಕಾರಣಗಳಿಂದ ಶಂಕರಾಚಾರ್ಯರ ವೇದಾಂತೋಪದೇಶಗಳನ್ನು ತರ್ಕಜಟಿಲವಾಗಿ ಮಾಡಿ ಸಾಮಾನ್ಯಜಿಜ್ಞಾಸುಗಳನ್ನು ವ್ಯಾಮೋಹಗೊಳಿಸಿಬಿಟ್ಟಿದ್ದಾರೆ. ಇದಕ್ಕೆ ಪರಿಹಾರವೇನೆಂದರೆ: ಮತ್ತೆ ನಾವು ಶಂಕರರ ಕಡೆಗೇ (Back to Shankara) ಹಿಂದಿರುಗಬೇಕು. ಅವರ ಸಾಕ್ಷಾತ್ ಕೃತಿಗಳೆಂದು ಸರ್ವರೂ ಒಪ್ಪಿರುವ ಪ್ರಸ್ಥಾನತ್ರಯಭಾಷ್ಯಗ್ರಂಥಗಳನ್ನೇ ಮೊದಲು ಅಧ್ಯಯನಮಾಡಬೇಕು.

ವೇದಾಂತಸಿದ್ಧಾಂತದ ಒಟ್ಟು ಸಾರವು ಹೀಗಿದೆ: **'ತತ್ಸತ್ಯಂ ಸ ಆತ್ಮಾ ತತ್ತ್ವಮಸಿ'** ಎಂಬ ವಾಕ್ಯದಲ್ಲಿ ಇದು ಪೂರ್ಣವಾಗಿ ಅಡಕವಾಗಿದೆ. ತತ್ ಎಂಬಿದೇ ಪರಮಸತ್ಯವು. ಇಲ್ಲಿ ತತ್ ಎಂಬುದು ಸರ್ವನಾಮವು. ಸರ್ವವೂ ಬ್ರಹ್ಮವೇ. ಅದೇ ನಿಜವು. ಹಾಗೆಯೇ 'ಅವನು ಆತ್ಮನು'–ಎಂದರೆ ಬ್ರಹ್ಮವೇ ಆತ್ಮನೆಂದರ್ಥ. 'ಆಪ್ನೋತಿ' (ಎಲ್ಲವನ್ನೂ ವ್ಯಾಪಿಸಿರುವದರಿಂದ) ಇತ್ಯಾತ್ಮಾ– ಎಂಬಂತೆ ಬ್ರಹ್ಮವೇ ಎಲ್ಲವನ್ನೂ ವ್ಯಾಪಿಸಿಕೊಂಡಿದೆ. ಅದು ನಿತ್ಯಶುದ್ಧಬುದ್ಧಮುಕ್ತಸ್ವಭಾವವಾಗಿದೆ. ವಿಚಾರಮಾಡುತ್ತಿರುವವನ ಸ್ವರೂಪವೇ ಆಗಿದೆ. ಅದನ್ನೇ 'ಅದೇ ನೀನು'– ಎಂದು ಶ್ರುತಿಯು ಹೇಳುತ್ತಿದೆ. ಈ ರೀತಿಯಾಗಿ ಜೀವಾತ್ಮನೆಂದು ನಾವು ತಿಳಿದುಕೊಂಡಿರುವ ನಮ್ಮ ನಿಜಸ್ವರೂಪವೇ ಪರಮಾತ್ಮನಾಗಿದೆ. ಇದನ್ನು ಶಾಸ್ತ್ರಾಚಾರ್ಯರ ಉಪದೇಶಗಳಿಂದ ಅರಿತುಕೊಂಡು ತಾನು ತನ್ನಲ್ಲೇ ಆಲೋಚಿಸಿ ಮನನಮಾಡಿಕೊಂಡು ಅದರಲ್ಲಿಯೇ ನೆಲೆನಿಲ್ಲುವದೇ ಮೋಕ್ಷವು. ಈ ಪರಮಪುರುಷಾರ್ಥಪ್ರಾಪ್ತಿಗೆ ಮನೋಬುದ್ಧಿಗಳನ್ನು ಒಳಮುಖವಾಗಿ ಮಾಡಿಕೊಂಡು ನೋಡುವದೊಂದೇ ಉಪಾಯವು. ಇದೇ ಅಧ್ಯಾತ್ಮಯೋಗವೆನಿಸುವದು. ನೀವು ಹೆಸರಿಸಿದ್ದ ಗ್ರಂಥದಲ್ಲಿ ಬುದ್ಧಿಪ್ರಧಾನರಿಗೆ ಆಹಾರವಾಗುವಂಥ ಚರ್ಚೆಗಳೂ ಪ್ರಶ್ನೋತ್ತರಗಳೂ ತುಂಬಿರುತ್ತವೆ. ಕೆಲವು ದೂರದವರೆಗೆ ಅವುಗಳಿಂದಲೂ ಉಪಕಾರವಾದೀತು. ಆದರೆ ಮನಶ್ಶಾಂತಿಯೂ ತೃಪ್ತಿಯೂ ಸಿಗಬೇಕಾದರೆ ಬುದ್ಧಿಯ ಮಟ್ಟದಲ್ಲಿಯೇ ನಿಲ್ಲಲಾಗದು. 'ಯೋ ಬುದ್ಧೇಃ ಪರತಸ್ತು ಸಃ' ಎಂದಂತೆ ಬುದ್ಧಿಯನ್ನು ದಾಟಿ ಆತ್ಮಸ್ವರೂಪದವರೆಗೂ ಏರಬೇಕು. ಹೀಗೆ ನೀವು ಅಂತರ್ಮುಖತ್ವವನ್ನೂ ಆತ್ಮಪ್ರಕಾಶವನ್ನೂ ಉಂಟುಮಾಡುವಂಥ ಗ್ರಂಥಗಳನ್ನು ಮಾತ್ರ ಅಧ್ಯಯನಮಾಡಿ ಕೃತಾರ್ಥರಾಗಿರಿ.

---

# ಸಚ್ಚಿದಾನಂದಮನನ

(ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

೨೭೪. ಹಿಂದಿನ ಕಾಲದಲ್ಲಿ ವಯಸ್ಸಾದವರು ತಮ್ಮ ಮಕ್ಕಳಿಗೆ ಮನೆಯ ವ್ಯವಸ್ಥೆಯ ಹೊಣೆಗಾರಿಕೆಯನ್ನೊಪ್ಪಿಸಿ ಕಾಡಿಗೆ ಹೋಗಿ ತಪಸ್ಸಿನಿಂದ ಕಾಲವನ್ನು ಕಳೆಯುವ ವಾಡಿಕೆಯಿತ್ತು. ಈ ಕಾಲಕ್ಕೆ ಅದು ಹೊಂದುವದಿಲ್ಲ. ಆದ್ದರಿಂದ ವಯಸ್ಸಾದವರು ಮಾನಸಿಕವಾದ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬೇಕು.

೨೭೫. ಎಷ್ಟುಕಾಲವಾದರೂ ಇಹಲೋಕದ ಭೋಗದ ಆಶೆಯು ಮನುಷ್ಯನಿಗೆ ತಪ್ಪುವದಿಲ್ಲ. ಯಯಾತಿಯು ಮತ್ತೆಮತ್ತೆ ಯೌವನವನ್ನು ಪಡೆದೂ ತೃಪ್ತನಾಗಲಿಲ್ಲ. ಕೊನೆಗೆ ಅವನು ಇಂತೆಂದನಂತೆ: "ಕಾಮ್ಯವಿಷಯಗಳ ಉಪಭೋಗದಿಂದ ಕಾಮವು ಎಂದಿಗೂ ಶಾಂತವಾಗದು ; ಬೆಂಕಿಯನ್ನಾರಿಸಲು ತುಪ್ಪವನ್ನು ಸುರಿದರೆ ಹೇಗೋ ಹಾಗೆ-ಬೆಂಕಿಯು ಭುಗಿಲೆನ್ನುವಂತೆ–ಭೋಗದಿಂದ ವಿಷಯಾಭಿಲಾಷೆಗಳು ಮತ್ತಷ್ಟು ಹೆಚ್ಚುತ್ತಿರುವವು. ಆದ್ದರಿಂದ ಬಯಕೆಗಳನ್ನು ಭೋಗಿಸುವದಕ್ಕಿಂತ ತ್ಯಾಗಮಾಡುವವನೇ ಸುಖಿಯು."

೨೭೬. ವಯಸ್ಸಾದಮೇಲೆ ಶರೀರಶಕ್ತಿಯು ಕುಗ್ಗುವದು. ಆದರೆ ಭೋಗೇಚ್ಛೆಯು ಕುಗ್ಗುವದಿಲ್ಲ. ಆ ಕಾಲದಲ್ಲಿ ಭೋಗಗಳಿಂದಾಗುವ ವಿಪರ್ಯಾಸಗಳನ್ನು ಮನದಂದುಕೊಂಡು ಆಹಾರವಿಹಾರಗಳ ನಿಯಮದಿಂದ ಶರೀರಾರೋಗ್ಯವನ್ನು ಕಾಪಾಡಿಕೊಳ್ಳಬೇಕು. ಮನಸ್ಸಿಗೆ ನೆಮ್ಮದಿಯನ್ನು ತಂದುಕೊಡುವ ಸದ್ವಿಚಾರ, ಈಶ್ವರಾರ್ಚನೆ, ಅತಿಥಿಸತ್ಕಾರ, ಇಂದ್ರಿಯನಿಗ್ರಹ–ಮುಂತಾದವುಗಳನ್ನು ಆಚರಣೆಗೆ ತಂದುಕೊಳ್ಳಬೇಕು.

೨೭೭. ಶರೀರದ ಅವಯವಗಳು ಸಡಿಲವಾಗುವದು, ಆರೋಗ್ಯವು ಆಗಾಗ್ಗೆ ತಪ್ಪುವದು, ಮನಸ್ಸಿಗೆ ಸಾಮಾನ್ಯವಿಷಯಗಳಲ್ಲಿ ಬೇಸರಹುಟ್ಟುವದು, ಹಲ್ಲುಗಳು ಸಡಿಲವಾಗಿ ನೋಯುವದು, ತಲೆಗೂದಲು ನರೆಯುವದು– ಇವೆಲ್ಲ ಈ ಲೋಕದ ಯೋಚನೆಯನ್ನು ಕಡಿಮೆಮಾಡಿ ಪರಲೋಕಕ್ಕೆ ಮತ್ತು ಮತ್ತೊಂದು ಜನ್ಮಕ್ಕೆ ತಕ್ಕ ಬುತ್ತಿಯನ್ನು ಕಟ್ಟಿಕೊಳ್ಳುವ ಯೋಚನೆಯನ್ನು ಮಾಡೆಂದು ಪ್ರಕೃತಿದೇವತೆಯು ಕೊಡುವ ಮುನ್ನೆಚ್ಚರಿಕೆಗಳು. ಆಗಲಾದರೂ ಸತ್ಸಂಗದಿಂದಲೂ ಶಾಸ್ತ್ರಪುರಾಣಶ್ರವಣಾದಿಗಳಿಂದಲೂ ಕೃತಾರ್ಥನಾಗುವ ಯೋಚನೆಯನ್ನು ಮಾಡಬೇಕು.

೨೭೮. ವರ್ತಮಾನಪತ್ರಿಕೆಗಳನ್ನೋದಿ ಮನಸ್ಸಿಗೆ ಕಿರಿಕಿರಿಯನ್ನು ತಂದುಕೊಳ್ಳುವ ವ್ಯಸನವನ್ನು ವೃದ್ಧರು ಕೈಬಿಡಬೇಕು. ಸಿನೆಮ, ನಾಟಕ, ನೃತ್ಯ, ವಾದ್ಯಗೋಷ್ಠಿಗಳಿಂದ ಮನಸ್ಸನ್ನು ಚಂಚಲಗೊಳಿಸಿಕೊಳ್ಳಬಾರದು. ಉತ್ತಮವಾದ ಗ್ರಂಥಗಳ ಪಾರಾಯಣ, ಪುರಾಣಶ್ರವಣ, ಸಾಧುಸಂತರ ಉಪದೇಶಗಳಿಗೆ ಕಿವಿಗೊಡುವದು– ಇಂಥ ಸತ್ಕಾಲಕ್ಷೇಪಗಳಿಂದ ಮನಸ್ಸನ್ನು ಶಾಂತವಾಗಿರಿಸಿಕೊಳ್ಳಬೇಕು.

# ಸನ್ಮಾನಸಮಾರಂಭಗಳು

(ಪತ್ರಿಕಾಪಾಠಕ)

ಈಚೆಗೆ ಪತ್ರಿಕೆಗಳಲ್ಲಿ ಕೆಲವು ಜನಪ್ರಿಯರಾದ ಹಾಗೂ ಪ್ರತಿಷ್ಠಿತವ್ಯಕ್ತಿಗಳಿಗೆ, ಕಲಾವಿದರಿಗೆ, ವಿದ್ವಾಂಸರುಗಳಿಗೆ ಸರ್ಕಾರದವರೂ ಅಭಿಮಾನಿಗಳೂ ಸಲ್ಲಿಸುತ್ತಿರುವ ಸನ್ಮಾನಗಳ ವರದಿಗಳು ಬರುತ್ತಲೇ ಇವೆ. ಕೆಲವು ವೇಳೆ ಒಬ್ಬನೇ ವ್ಯಕ್ತಿಗೆ ಬೇರೆ ಬೇರೆಯ ಸಂದರ್ಭಗಳಲ್ಲಿ ಹಾಗೂ ಬೇರೆಬೇರೆಯ ಸ್ಥಳಗಳಲ್ಲಿ ಸನ್ಮಾನಗಳು ಸಲ್ಲು ತ್ತಿರುವದೂ ಸಂತೋಷದ ವಿಷಯುವೇ ಸರಿ. ಭಗವಂತನ ಅಂಶಭೂತರೇ ಆದ ಜೀವರುಗಳಲ್ಲಿ ಕೆಲವರಲ್ಲಿ ಮಾತ್ರ ಹೊರತೋರಿಕೊಂಡ ದೈವಿಕವಿಭೂತಿವೈಶಿಷ್ಟ್ಯ ಗಳೇ ಇಂಥ ಸಮಾರಂಭಗಳಿಗೆ ಕಾರಣವಾಗಿರುತ್ತವೆ. ಇದೇನೂ ಸಾಮಾನ್ಯ ವಿಷಯವಲ್ಲ. ಈ ಮೂಲಕ ಪ್ರತಿಯೊಬ್ಬರೂ ಭಗವಂತನ ವಿಶ್ವರೂಪದರ್ಶನಕ್ಕೇ ಅಣಿಯಾಗಬಹುದು. ಸತ್ ಎಂದರೆ ಸದ್ಭಾವ– ಸಾಧುಭಾವಗಳೆಂದೂ ಆ ಭಾವನೆ ಗನುಗುಣವಾಗಿ ಮಾಡುವ ಕರ್ಮವೂ ಕೂಡ 'ಸತ್' ಎನಿಸಿಕೊಳ್ಳುವದೆಂದೂ ಭಗವಂತನ ಹೇಳಿಕೆಯಿದೆ. ಸನ್ಮಾನವನ್ನು ಹೊಂದಿದ ವ್ಯಕ್ತಿಯೂ ತಾನೇ ದೊಡ್ಡವ ನೆಂದುಕೊಳ್ಳದೆ ಈ ಗೌರವವು ತನ್ನ ಕಲೆ ಅಥವಾ ವಿದ್ಯೆಗೇ ಸಂದಿರುವದೆಂದೂ ಆ ಕಲಾಸೇವಕನೇ ತಾನೆಂದೂ ಭಾವಿಸಿಕೊಂಡಲ್ಲಿ ಒಂದು ಹೆಚ್ಚಿನ ಅಧ್ಯಾತ್ಮ ಸಾಧನವಾಗುವದರಲ್ಲಿ ಸಂಶಯುವಿಲ್ಲ. ಸನ್ಮಾನಸಮಾರಂಭಗಳ ಉದ್ದೇಶವೂ ಅದಕ್ಕಾಗಿ ಮಾಡಿದ ಖರ್ಚುವೆಚ್ಚಗಳೂ ಆಗ್ಗೆ ಸಾರ್ಥಕವೇ ಆಗುತ್ತವೆ.

ಆದರೆ ಅಧ್ಯಾತ್ಮಜ್ಞಾನಿಗಳು ಇಂಥ ಸಂದರ್ಭದಲ್ಲಿ– ವ್ಯಾವಹಾರಿಕವಾಗಿ ಈ ರೀತಿಯ ಗೌರವಸಮರ್ಪಣೆಯು ಸೂಕ್ತವಾದರೂ– 'ಇದೇನೂ ಶಾಶ್ವತವಲ್ಲ, ನಿತ್ಯವಲ್ಲ'ವೆಂದೇ ಎಚ್ಚರಿಸುತ್ತಾರೆ. ಏಕೆಂದರೆ ಮಾನವನ ನಿಜವಾದ ಸ್ವರೂಪವು (ಆತ್ಮವು) ಕರ್ಮದಿಂದ ಹಿಗ್ಗುವದಿಲ್ಲ ; ಕುಗ್ಗುವದಿಲ್ಲ–ವೆಂದೇ ಉಪನಿಷತ್ತುಗಳಲ್ಲಿ ಘೋಷಿಸಲ್ಪಟ್ಟಿದೆ. ಆದ್ದರಿಂದ ನಿಜವಾದ ತನ್ನ ಆತ್ಮತತ್ತ್ವವನ್ನು ಅರಿತುಕೊಳ್ಳು ವವರೆಗೂ ಮಾನವನು ಪೂರ್ಣನಾಗುವದಿಲ್ಲ. ಪೂರ್ಣನಾಗದೆ ಪೂಜಿಸಲ್ಪಟ್ಟಲ್ಲಿ ಆಸುರೀಸಂಪತ್ತಿಗೆ ಜಾರುವ ಸಂಭವವೂ ಉಂಟು. ಹೀಗಿರುವದರಿಂದ ಎಲ್ಲಾ ಪೂಜಾಗೌರವಗಳೂ ಪರಿಪೂರ್ಣನೂ ಸರ್ವಜ್ಞ ಸರ್ವಶಕ್ತನೂ ಸಕಲರ ಅಂತ ರಾತ್ಮನೂ ಆದ ಭಗವಂತನಿಗೂ ಅವನ ನಿತ್ಯವಿಭೂತಿಗಳಾದ ಸೂರ್ಯ, ಚಂದ್ರ, ಪೃಥಿವೀ– ಮುಂತಾದ ಸ್ವರೂಪಗಳಿಗೂ ಸಲ್ಲುವದೇ ಯುಕ್ತವಾಗಿದೆ. ಭಗವಂತ ನನ್ನೇ ಮರೆತು– ಸಮಷ್ಟಿಸ್ವರೂಪನಾದ ಜನಾರ್ದನನನ್ನೇ ಅನಾದರಮಾಡಿ 'ವ್ಯಕ್ತಿ ಪೂಜೆ'ಯನ್ನು ಕೈಗೊಳ್ಳುವದು ಎಷ್ಟರಮಟ್ಟಿಗೆ ಸರಿ? ಎಂಬಿದನ್ನು ಬಲ್ಲವರು ವಿಚಾರಮಾಡಬೇಕು. ಗೌರವಕ್ಕೆ ಯೋಗ್ಯರಾದವರನ್ನು ಹುಡುಕುತ್ತಾಹೋದರೆ ಎಲ್ಲರೂ ಯಾವದಾದರೊಂದು ರೀತಿಯಿಂದ ಗೌರವಾರ್ಹರೇ ಆಗಿರುತ್ತಾರೆ. ಯಾರಿಗೂ ವಿರೋಧವಾಗದಂತೆ- ಮನನೋಯದಂತೆ ಗೌರವಾರ್ಪಣೆಯನ್ನು ಮಾಡಬೇಕಾದರೆ ಭಗವಂತನಿಗೆ ಮಾತ್ರವೇ ಮಾಡಬೇಕು. ಎಲ್ಲ ಜೀವರಿಗೂ ಇದೇ ಶ್ರೇಯಸ್ಕರವು.

———

# ಗ್ರಂಥಪರಿಚಯ

**೧. ತತ್ತ್ವಜ್ಞಾನವಿಜ್ಞಾನಸಮನ್ವಯ : ಬರೆದವರು : ಶ್ರೀ ಕೆಂಬಾಳು ನಂಜಪ್ಪನವರು. ಪ್ರಕಾಶಕರು : ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ. ಪುಟಗಳು : ಕ್ರೌನ್ ೮೮ ; ಬೆಲೆ ರೂ. ೩.**

ಈ ಪುಸ್ತಕವು ವೇದಾಂತತತ್ತ್ವಜ್ಞಾನವು ವೈಜ್ಞಾನಿಕವಾಗಿಯೂ ಸಮರ್ಥನೀಯವಾಗಿದೆಯೆಂದೂ ವಿಜ್ಞಾನಸಂಶೋಧಕರೂ ಆತ್ಮತತ್ತ್ವದಕಡೆಗೇ ಒಲಿಯುತ್ತಿದ್ದಾರೆಂದೂ ಕೆಲವು ಉದಾಹರಣೆಗಳ ಮೂಲಕ ವಿವರಿಸಹೊರಟಿದೆ. ಇದಕ್ಕೆ ಆಧಾರವಾಗಿ ಬೃಹದಾರಣ್ಯಕದ ಯಾಜ್ಞವಲ್ಕ್ಯಮೈತ್ರೇಯೀಸಂವಾದವನ್ನು ಅಳವಡಿಸಲಾಗಿದೆ. ಗ್ರಂಥಕರ್ತರು ಬ್ರಹ್ಮೀಭೂತ ಹೊಳೆನರಸೀಪುರದ ಶ್ರೀಶ್ರೀಗಳವರ ಅನುಯಾಯಿಗಳು. ಕಾರ್ಯಾಲಯದ ಗ್ರಂಥಗಳಿಂದ ಪ್ರಭಾವಿತರಾದವರು. ಆದ್ದರಿಂದ ವಿಚಾರಸರಣಿಯು ಸಾಂಪ್ರದಾಯಿಕವಾಗಿದೆ. ಆದರೆ ಪ್ರತಿಪಾದನಕ್ರಮವು ಇನ್ನೂ ಪಕ್ವವಾಗಬೇಕು. ವೇದಾಂತೋದಿತ ಆತ್ಮತತ್ತ್ವವು ವಿಜ್ಞಾನದ ಶೋಧನೆಗಳಿಂದೇನೂ ಸಿದ್ಧವಾಗಬೇಕಾಗಿಲ್ಲ. ಏಕೆಂದರೆ ಭೌತಿಕವಿಜ್ಞಾನಿಗಳ ಅನ್ವೇಷಣಾಕ್ರಮವು ಬಹಿರ್ಮುಖವಾಗಿರುತ್ತದೆ. ಅಂಥವರು ಕಂಡುಹಿಡಿದಿರುವದೆಲ್ಲ ಮತ್ತು ಕಂಡುಹಿಡಿಯಬಹುದಾದದ್ದೆಲ್ಲ 'ಅನಾತ್ಮ'ವೇ ಆಗಿರುತ್ತದೆ. ಆತ್ಮಸಂಶೋಧನೆಯ ಮಾರ್ಗವೇ ಬೇರೆ. ಅದು 'ಅಧ್ಯಾತ್ಮಯೋಗ'ವೆಂಬ ಅಂತರ್ಮುಖವಾದ ಸಾಧನದಿಂದ ಮಾತ್ರ ಲಭ್ಯವಾಗಿರುತ್ತದೆ. ಹೀಗಿರುವಲ್ಲಿ ವೇದಾಂತಪ್ರತಿಪಾದ್ಯವಾದ ಸ್ವತಃಸಿದ್ಧವಾದ ಬ್ರಹ್ಮತತ್ತ್ವವಿಚಾರವು ವಿಜ್ಞಾನಶೋಧನೆಗಳನ್ನೇಕೆ ಅವಲಂಬಿಸಿಕೊಳ್ಳಬೇಕು? ಶೋಧಕನ ಆತ್ಮವು ಎಂದಿಗೂ ಶೋಧನೆಗೆ ವಿಷಯವಾಗಲೇ ಆರದು. ಆದರೂ ವಿಜ್ಞಾನಿಗಳ ಪ್ರಯತ್ನಗಳಿಂದಲೂ ನಮಗೆ ಸೂಕ್ಷ್ಮನಾದ ಆತ್ಮನ ಅನ್ವೇಷಣೆಗೆ ಸ್ವಲ್ಪಮಟ್ಟಿಗೆ ಸಹಾಯವಾದೀತೆಂದು ಗ್ರಂಥಕಾರರು ಭಾವಿಸಿರುವಂತಿದೆ. ಇದರಲ್ಲಿರುವ ಕೆಲವು ಪತ್ರಿಕಾಭಿಪ್ರಾಯಸಂಗ್ರಹಗಳು ಮನನೀಯವಾಗಿವೆ. ಆಧುನಿಕದೃಷ್ಟಿಯ ವಿಚಾರಕರು ಒಮ್ಮೆ ಓದಬೇಕಾದ ಗ್ರಂಥವಿದು.

**ಸಂಸ್ಕೃತ ಧಾತುರೂಪ ಕೋಶ:** ಬರೆದವರು: ಶ್ರೀ|| ಕೆ.ಎಸ್. ಕಣ್ಣನ್. ಎಂ.ಎ., ನ್ಯಾಷನಲ್ ಕಾಲೇಜ್, ಬೆಂಗಳೂರು; ಪ್ರಕಾಶಕರು : ಭಾರತೀಪ್ರಕಾಶನ, 375, Upstairs, 16th 'A' Main Road, 4th 'T' Block, Jayanagar, Bangalore-41. ಪುಟಗಳು : ಕ್ರೌನ್ ೧೬೦; ಬೆಲೆ ೧೦ರೂ.

ಈ ಪುಸ್ತಕದಲ್ಲಿ ಸಂಸ್ಕೃತಭಾಷೆಯ ೩೬೦ ಮುಖ್ಯ ಧಾತುಗಳನ್ನು ತೆಗೆದುಕೊಂಡು ಪ್ರತಿಯೊಂದು ಧಾತುವಿಗೂ ದಶ-ಲ-ಕಾರಗಳಲ್ಲಿಯೂ ಸಿದ್ಧವಾಗುವ ರೂಪಗಳನ್ನು ಕೊಡಲಾಗಿದೆ. ಅಕಾರಾದಿಯಾಗಿ ಧಾತುಗಳನ್ನು ಕೊಟ್ಟಿದೆ. ಪುಸ್ತಕದ ಕೋಶಭಾಗವನ್ನು ದರ್ಶ ಆದರ್ಶ ಎಂದು ವಿಂಗಡಿಸಿದೆ. ದರ್ಶಭಾಗದಲ್ಲಿ ದಶಲಕಾರಗಳ ಪ್ರಥಮಪುರುಷ ಏಕವಚನ ರೂಪಗಳನ್ನು ಕೊಟ್ಟಿದೆ. ಆದರ್ಶಭಾಗದಲ್ಲಿ ೨, ೩, ೫, ೭, ೮, ೯ ಗಣಗಳ ಧಾತುಗಳನ್ನು ಪರಸ್ಮೈ- ಮುಂತಾದ ವಿಭಾಗಗಳಿಂದ ಅಕಾರಾದಿಯಾಗಿ ಕೊಟ್ಟಿದೆ. ಒಟ್ಟು ೪೫,೦೦೦ ಸಿದ್ಧರೂಪಗಳು ಇಲ್ಲಿ ದೊರೆಯುತ್ತವೆ. 'ಧಾತುಪುಷ್ಟಿ'ಯಿಲ್ಲದವರಿಗೆ ಉತ್ತಮ 'ಟಾನಿಕ್'ನಂತಿರುವ ರೆಫರೆನ್ಸ್ ಪುಸ್ತಕವಿದು.

**ಸಾದರಸ್ವೀಕಾರ :** ಸಮ್ಯಗ್ದರ್ಶನ (ವೇದಾಂತಸುಬ್ಬಯ್ಯಶಾಸ್ತ್ರಿ ರಚಿತ)

# ಅರಿಷ್ಟೈರ್ನಃ ಪಥಿಭಿಃ ಪಾರಯಂತಾ

(ಅಧ್ಯಾತ್ಮವಿದ್ಯಾಪ್ರವೀಣ ವೇ|| ಹೆಚ್.ಎಸ್. ಲಕ್ಷ್ಮೀನರಸಿಂಹಮೂರ್ತಿಗಳು)

ವಿಷ್ಣುಸೂಕ್ತದ ೨೪ನೆಯ ಮಂತ್ರವನ್ನು ಈಗ ವಿಚಾರಮಾಡೋಣ :

**ಓಂ || ಸಂ ವಾಂ ಕರ್ಮಣಾ ಸಮಿಷಾ ಹಿನೋಮೀಂದ್ರಾವಿಷ್ಣೂ ಅಪಸಸ್ಪಾರೇ ಅಸ್ಯ | ಜುಷೇಥಾಂ ಯಜ್ಞಂ ದ್ರವಿಣಂ ಚ ಧತ್ತಂ ಅರಿಷ್ಟೈರ್ನಃ ಪಥಿಭಿಃ ಪಾರಯಂತಾ ||೨೪||**

"ಎಲೈ ಇಂದ್ರಾವಿಷ್ಣುಗಳೆ, ನಿಮ್ಮಿಬ್ಬರನ್ನೂ ಸ್ತೋತ್ರರೂಪವಾದ ಕರ್ಮದಿಂದಲೂ ಹವಿರ್ದಾನದಿಂದಲೂ ನಾನು ಚೆನ್ನಾಗಿ ಪ್ರೇರಿಸುತ್ತಿರುವೆನು. ಕರ್ಮದ ಕೊನೆಯಲ್ಲಿ ನೀವು ಅನುಗ್ರಹಮಾಡಿರಿ. ಮತ್ತು ಉಪದ್ರವಗಳಿಲ್ಲದ ಹಾದಿಯಿಂದ ನಮ್ಮನ್ನು ಪಾರುಗೊಳಿಸಿರಿ. ಧನವನ್ನೂ ದಯಪಾಲಿಸಿರಿ" ಎಂದು ಈ ಮಂತ್ರದ ಸರಳವಾದ ಅರ್ಥವು.

ಇಂದ್ರನು ಬಲಾಧಿಪತಿಯು. ಆತನು ಯಜ್ಞವನ್ನು ರಕ್ಷಿಸಲು ಸಮರ್ಥನಾಗಿರುವನು. ಅವನನ್ನು ಎದುರಾಳಿಯಿಲ್ಲದವನೆಂದೂ ಯಜ್ಞವನ್ನು ಮಾಡುವ ಯಜಮಾನನಿಗೆ ರಕ್ಷಣೆಯನ್ನು ಕೊಡುವವನೆಂದೂ ವೇದಗಳಲ್ಲಿ ಸ್ತುತಿಸಲಾಗಿದೆ. ಅಸುರರನ್ನು ಜಯಿಸುವದರಲ್ಲಿಯೂ ಆತನು ಅಪ್ರತಿಮಪರಾಕ್ರಮನು. ಹಾಗೆಯೇ ವಿಷ್ಣುವು ಫಲಪ್ರದನು. ಯಾವ ದೇವತೆಯೂ ವಿಷ್ಣುವಿಗೆ ಸಮನಾಗಲಾರನು. ಎಲ್ಲಾ ಕಾಮಗಳನ್ನೂ ಪರಿಪೂರ್ಣಗೊಳಿಸುವ ಸಾಮರ್ಥ್ಯವು ವಿಷ್ಣುವಿಗೆ ಮಾತ್ರವೇ ಇರುವದು. ನಾವು ಬಲ, ವೀರ್ಯ, ಬುದ್ಧಿ, ಧನ, ಯಶಸ್ಸು, ಆಯುಸ್ಸು–ಮುಂತಾದ ಕಾಮಗಳನ್ನು ಒಬ್ಬೊಬ್ಬ ದೇವತೆಯಿಂದ ಪಡೆಯಬೇಕಾದರೂ ಆಯಾ ದೇವತೆಯನ್ನು ಒಲಿಸಿಕೊಳ್ಳಬೇಕು. ಆ ದೇವತೆಗಾಗಿ ಹವಿರ್ದಾನವನ್ನೂ ಮಾಡಬೇಕು. ಮಾಡುವಾಗಲೂ ಮಂತ್ರತಂತ್ರಗಳಲ್ಲಿ ಲೋಪವಾದರೆ ವಿಧಿಗಳಲ್ಲಿ ನ್ಯೂನಾತಿರೇಕಗಳಾದರೆ ಆ ದೇವತೆಯು ಹವಿಸ್ಸನ್ನೂ ಸ್ವೀಕರಿಸುವದಿಲ್ಲ. ಫಲವನ್ನೂ ಕೊಡುವದಿಲ್ಲ. ಆದರೆ ಕರ್ಮಾನುಷ್ಠಾನವನ್ನು ಮಾಡುವಾಗ ಎಷ್ಟೇ ಎಚ್ಚರವಾಗಿದ್ದರೂ ತಪ್ಪುಗಳುಂಟಾಗಿಬಿಡುತ್ತವೆ. ಹೀಗಿರುವದರಿಂದಲೇ ವಿಷ್ಣುಸ್ಮರಣೆಯು ಎಲ್ಲಾ ಕರ್ಮಗಳ ಅನುಷ್ಠಾನಕಾಲಕ್ಕೂ ಕಡ್ಡಾಯವಾಗಿರುತ್ತದೆ. ವಿಷ್ಣುವಿನ ಸ್ಮರಣೆಯಿಂದ ಕರ್ಮಛಿದ್ರಗಳು ಪರಿಹಾರವಾಗಿ ದೇವತೆಗಳೆಲ್ಲರೂ ಒಲಿಯುತ್ತಾರೆ. ಹೀಗೆ ಕರ್ಮರಕ್ಷಣೆಗೆ ಹಾಗೂ ಬಲಪ್ರಾಪ್ತಿಗೆ ಇಂದ್ರನೂ ಕರ್ಮಫಲದಾನಕ್ಕೆ ವಿಷ್ಣುವೂ ಸನ್ನದ್ಧರಾದರೆಂದರೆ ನಮ್ಮ ಪ್ರಯತ್ನಗಳು ಸಿದ್ಧಿಸುವವು. ಈ ಮಂತ್ರದಲ್ಲಿ ಈ ಎರಡು ದೇವತೆಗಳನ್ನೂ ಆರಾಧಿಸಿ ಯಜಮಾನನು ತನಗೆ ಐಶ್ವರ್ಯವನ್ನೂ ಸುಖವನ್ನೂ ಉಂಟುಮಾಡುವಂತೆ ಕೇಳಿಕೊಂಡಿರುತ್ತಾನೆ. ಮತ್ತು ಸನ್ಮಾರ್ಗದಲ್ಲಿ ತನ್ನನ್ನು ಕಡೆಹಾಯಿಸಬೇಕೆಂದೂ ಪ್ರಾರ್ಥಿಸಿದ್ದಾನೆ. ಭಗ

ವಂತನ ಪ್ರೇರಣೆಯಿಂದಲೇ ನಾವು ಸತ್ಕರ್ಮಗಳನ್ನು ಮಾಡುವದು ಸಾಧ್ಯ. ಆದರೆ ಮೊದಲು ನಾವು ಅವುಗಳನ್ನು ಸಂಕಲ್ಪಿಸಬೇಕು. ಅನಂತರ ಅಂಥ ಯಜ್ಞವನ್ನು ದೇವರು ನಡೆಯಿಸಿಕೊಡುತ್ತಾನೆ. ಇಂದ್ರರೂಪದಿಂದಲೂ ವಿಷ್ಣುರೂಪದಿಂದಲೂ ಭಗವಂತನೊಬ್ಬನೇ ಇದ್ದುಕೊಂಡು ಆಯಾ ಮಂತ್ರಗಳಿಂದ ಸ್ತೋತ್ರಮಾಡಲ್ಪಟ್ಟವನಾಗಿ ಯಜ್ಞವನ್ನು ಪೂರ್ಣಗೊಳಿಸುತ್ತಾನೆ. ಯಜಮಾನನಿಗೆ ಐಹಿಕಾಮುಷ್ಮಿಕ ಫಲಗಳನ್ನೂ ದಯಪಾಲಿಸುತ್ತಾನೆ-ಎಂದಭಿಪ್ರಾಯ.

ಈಗ ೫ನೆಯ ಮಂತ್ರವನ್ನು ವಿಚಾರಮಾಡೋಣ :

**ಓಂ ॥ ಯಾ ವಿಶ್ವಾಸಾಂ ಜನಿತಾರಾ ಮತೀನಾಂ ಇಂದ್ರಾವಿಷ್ಣೂ ಕಲಶಾ ಸೋಮಧಾನಾ।ಪ್ರ ವಾಂ ಗಿರಃ ಶಸ್ಯಮಾನಾ ಅವಂತು ಪ್ರಸ್ತೋ- ಮಾಸೋ ಗೀಯಮಾನಾಸೋ ಅರ್ಕೈಃ ॥**

"ಯಾವ ಆ ಪ್ರಸಿದ್ಧರಾದ ಇಂದ್ರಾವಿಷ್ಣುಗಳು ಸ್ತೋತ್ರಗಳ ಜನ್ಮದಾತೃಗಳಾಗಿದ್ದುಕೊಂಡು ಸೋಮ (ರಸ)ಕ್ಕೆ ಆಧಾರರಾಗಿ ಕಲಶದಂತೆ ಇರುವರು. ಎಲೈ ಇಂದ್ರಾವಿಷ್ಣುಗಳೆ, ನೀವುಗಳು ಸ್ತೋತ್ರಮಾಡಲ್ಪಟ್ಟವರೂ ಗಾನಮಾಡಲ್ಪಟ್ಟವರೂ ಆಗಿ ನಮ್ಮ ಪ್ರಾರ್ಥನೆಗಳನ್ನು ಸ್ವೀಕರಿಸಿರಿ" ಎಂದು ಈ ಮಂತ್ರದ ಸರಳವಾದ ಅಭಿಪ್ರಾಯ.

ಸ್ತೋತ್ರಗಳಿಗೆ ಮೂಲಭೂತರಾದವರೇ ದೇವತೆಗಳು. ಹೇಗೆಂದರೆ ದೇವತೆಗಳಾಗಲೀ ಅವರ ಗುಣವಿಶೇಷಗಳಾಗಲೀ ಬಲಶಕ್ತಿವೀರ್ಯಪರಾಕ್ರಮಗಳಾಗಲಿ- ಭಗವಂತನಿಂದ ಆವಿರ್ಭಾವವಾಗದೆ ಇದ್ದಲ್ಲಿ ಯಾರನ್ನು ಕುರಿತು ಏನೆಂದು ಸ್ತೋತ್ರಮಾಡುವದಕ್ಕಾದೀತು? ಉದಾಹರಣೆಗೆ: ಶ್ರೀ ತ್ಯಾಗರಾಜರು ಸುಪ್ರಸಿದ್ಧವಾಗ್ಗೇಯಕಾರರೂ ಸಂಗೀತಕಲೆಯ ಉಪಾಸಕರೂ ಆಗಿದ್ದರು. ಹಾಗೆಯೇ ಅವರು ಹಾಡಿರುವ ಕೀರ್ತನೆಗಳಲ್ಲಿ ಶ್ರೀರಾಮನೆಂಬ ಹೆಸರಿನ ದೇವತೆಯೂ ಆತನ ಗುಣಕರ್ಮಲೀಲೆಗಳೂ ತುಂಬಿರುತ್ತವೆ. ಒಂದು ವೇಳೆ ಶ್ರೀರಾಮನ ಅವತಾರವಾಗಲಿ, ಅವನ ಚರಿತ್ರೆಯಾಗಲೀ ಜಗತ್ತಿನಲ್ಲಿ ನಡೆಯದೆ ಹೋಗಿದ್ದರೆ ತ್ಯಾಗರಾಜರು ಹೇಗೆ ತಾನೆ ಪ್ರಸಿದ್ಧರಾಗುತ್ತಿದ್ದರು? ಆದ್ದರಿಂದ ತ್ಯಾಗರಾಜರ ರಾಮಕೀರ್ತನೆಗಳಿಗೆ ಹೇಗೆ ಶ್ರೀರಾಮಾವತಾರವೇ ಮೂಲವೋ ಹಾಗೆ ವೇದೋಕ್ತವಾದ ದಿವ್ಯಸೂಕ್ತಗಳಿಗೆಲ್ಲ ಭಗವಂತನ ವಿಭೂತಿರೂಪರಾದ ದೇವತೆಗಳೇ ಮೂಲವು. ಈ ದೇವತೆಗಳಲ್ಲಿ ಅಗ್ರಗಣ್ಯರಾದ ಇಂದ್ರವಿಷ್ಣುಗಳನ್ನು ಇಲ್ಲಿ ಸ್ತೋತ್ರಗಳ ಜನಯಿತೃಗಳೆಂದು ಹೊಗಳಿದೆ. ಅವರುಗಳ ಗುಣಗಾನವೇ ಮಂತ್ರರೂಪವಾದ ಸ್ತುತಿಗಳಾಗಿವೆ. ಮತ್ತು ಈ ದೇವತೆಗಳಿಬ್ಬರೂ ಯಜ್ಞದ ಪ್ರಧಾನವಸ್ತುವಾದ ಸೋಮಕ್ಕೆ ಕಲಶದಂತಿರುವರು. ಹೇಗೆ ಚೆಂಬಿನಲ್ಲಿ ಹಾಲು, ಪಾನಕ ಮುಂತಾದವುಗಳನ್ನು ತುಂಬಿಡುವರೋ ಹಾಗೆ ಸೋಮರಸವು ಇಂದ್ರವಿಷ್ಣುಗಳನ್ನೇ ಆಧಾರವಾಗಿ ಹೊಂದಿರುವದು. ಸೋಮರಸವು ತುಂಬಿದ ಕಲಶಗಳೂ ಇಂದ್ರವಿಷ್ಣುಗಳ ಪ್ರತೀಕವಾಗಿರುವವೆಂದರ್ಥ. ಹೀಗೆ

ಯಜ್ಞಪದಾರ್ಥಗಳನ್ನು ಪ್ರತಿನಿಧಿಸುವ ದೇವತೆಗಳಾದ ಇಂದ್ರವಿಷ್ಣುಗಳು ಋತ್ವಿಜರಿಂದ ಸ್ತುತಿಸಲ್ಪಡುತ್ತಾ ಯಜ್ಞವನ್ನು ನಿರ್ವಹಿಸುವರು. ಇಲ್ಲಿ ಅರ್ಕೈಃ ಎಂದರೆ ಸ್ತೋತ್ರಮಾಡುವವರಿಂದ-ಎಂದು ಭಾಷ್ಯಕಾರರು ಅರ್ಥಮಾಡಿರುತ್ತಾರೆ. ಯಜ್ಞದಲ್ಲಿ ಪ್ರಸ್ತೋತೃಗಳೆನಿಸಿದ ಋತ್ವಿಜರೇ ಮುಂದಾಳುಗಳು. ಅವರುಗಳು ಗಾನಮಾಡಿದ ಅನಂತರವೇ ದೇವತೆಗಳು ಆಗಮಿಸುವರು. ಅನಂತರ ಅಧ್ವರ್ಯುವು ಹವಿಸ್ಸನ್ನು ಅರ್ಪಿಸುವನು. ಯಾವದೇ ಕಾರ್ಯವನ್ನು ಮಾಡಲಿ, ಆಹ್ವಾನವನ್ನು ಕೊಡುವದು ಬಹು ಮುಖ್ಯ ಕೆಲಸವು. ಯಾರನ್ನು ಹೇಗೆ ಕರೆಯಬೇಕೆಂಬುದೂ ಜಾಣತನದ ಕೆಲಸವೇ ಸರಿ. ಆದ್ದರಿಂದ ಋಕ್ಕುಗಳ ಮೂಲಕ ಪ್ರಸ್ತೋತೃಗಳು ಗಾನಮಾಡುವವರಾಗಿ ಇಂದ್ರವಿಷ್ಣುಗಳನ್ನೂ ಆಹ್ವಾನಿಸುವರು. ಇಂಥ ನೀವು ನಮ್ಮ ಪ್ರಾರ್ಥನೆಗಳನ್ನು ಸ್ವೀಕರಿಸಿರಿ-ಎಂದು ಇಲ್ಲಿ ಕೇಳಿಕೊಂಡಿದೆ.

ಈಗ ೨೬ನೆಯ ಮಂತ್ರವನ್ನು ವಿಚಾರಮಾಡೋಣ :

**ಓಂ ॥ ಇಂದ್ರಾವಿಷ್ಣೂ ಮದಪತೀ ಮದಾನಾಮಾಸೋಮಂ ಯಾತಂ ದ್ರವಿಣೋ ದಧಾನಾ । ಸಂ ವಾಮಂಜಂತ್ವಕ್ತುಭಿರ್ಮತೀನಾಂ ಸಂಸ್ತೋಮಾಸಃ ಶಸ್ಯಮಾನಾ ಸ ಉಕ್ಥೈಃ ॥೨೬॥**

"ಎಲೈ ಇಂದ್ರಾವಿಷ್ಣುಗಳೆ, ನೀವು ಸೋಮಕ್ಕೆ ಒಡೆಯರು. ಆದ್ದರಿಂದಲೇ ಧನವನ್ನು ನಮಗೆ ಉಂಟುಮಾಡಿರಿ. ನೀವು ಸೋಮವನ್ನು ಕುರಿತು ಸ್ತೋತ್ರಮಾಡುವವರಿಗೆ ತೇಜಸ್ಸುಗಳಿಂದ ಅನುಗ್ರಹಮಾಡಿರಿ. ಅಂಥವರನ್ನು ಚೆನ್ನಾಗಿ ಅಭಿವೃದ್ಧಿಗೊಳಿಸಿರಿ" ಎಂದು ಈ ಮಂತ್ರದ ಸರಳವಾದ ಅಭಿಪ್ರಾಯ.

ಇಲ್ಲಿ ಸೋಮವನ್ನು ಮದವನ್ನುಂಟುಮಾಡುವ ದ್ರವ್ಯವೆಂದೂ ಇಂದ್ರಾವಿಷ್ಣುಗಳನ್ನು ಮದಪತಿಗಳೆಂದೂ ಹೊಗಳಿದೆ. ಮದವೆಂದರೆ ಉತ್ಸಾಹವೆಂದರ್ಥ. ಕಾಮರಾಗಗಳಿಂದಾದ ಆಸುರೀಸಂಪತ್ತಿನ ಮದವಲ್ಲ. ದೇವತೆಗಳು ಬಲಿಷ್ಠರಾಗುವದು ಬಹಳ ಅಗತ್ಯವು. ಏಕೆಂದರೆ ಅವರೇ ಲೋಕರಕ್ಷಕರು. ಯಾರು ಸೋಮಯಾಗದಿಂದ ದೇವತೆಗಳನ್ನು ಬಲಗೊಳಿಸುವರೋ ಅಂಥವರು ಜಗತ್ತಿನಲ್ಲಿ ಹೆಚ್ಚಿದಂತೆಲ್ಲ ಲೋಕಕ್ಷೇಮವಾಗಲಿದೆ. ಒಟ್ಟಿನಲ್ಲಿ ದೇವತೆಗಳ ಅಭಿವೃದ್ಧಿಗಾಗಿ ಯಜ್ಞವನ್ನು ಮಾಡಬೇಕೆಂದಾಯಿತು. ಯಾರು ಯಜ್ಞದಲ್ಲಿ ಸೋಮವನ್ನು ದೇವತೆಗಳಿಗೆ ಸಮರ್ಪಿಸುವರೋ ಅಂಥವರನ್ನು ದೇವತೆಗಳೂ ಅನುಗ್ರಹಿಸಿ ಬೆಳೆಸುವರು. ಹೀಗೆ ದೇವತೆಗಳಿಗೂ ಮಾನವರಿಗೂ ಯಜ್ಞದಮೂಲಕ ಸಂಬಂಧವಿರುವದು. ದೇವತೆಗಳ ಪ್ರಸಾದರೂಪವಾದ ತೇಜಸ್ಸು ಸಹ ಯಜ್ಞಕರ್ತೃಗಳಿಗೆ ಲಭಿಸುತ್ತದೆ. ಯಜ್ಞವು ಸದಾಕಾಲವೂ ನಡೆದುಕೊಂಡೇ ಇರಬೇಕು-ಎಂದರೆ ಪ್ರತಿವರ್ಷದಲ್ಲಿಯೂ ಆಯಾ ಕಾಲದಲ್ಲಿ ತಪ್ಪದೆ ನಡೆಯಬೇಕು. ನಾವು ದೇವತೆಗಳನ್ನು ಆರಾಧಿಸದೆ ತಿರಸ್ಕಾರ ಮಾಡಿದ್ದೇ ಆದರೆ ರಾಷ್ಟ್ರದಲ್ಲಿ ಮಳೆಬೆಳೆಗಳು ಸೊನ್ನೆಯಾಗಿ ಸಂಕಟಪರಂಪರೆಗಳು ಸುಳಿದಾಡುವವು. ಹಾಗಾಗದಂತೆ ವೈದಿಕಯಜ್ಞಗಳನ್ನು ಅನುಷ್ಠಿಸಿ ಲೋಕಕ್ಷೇಮವನ್ನು ಸಾಧಿಸೋಣ.

---

# ನರಕಚತುರ್ದಶೀವ್ರತ

(ಅಧ್ಯಾತ್ಮವಿದ್ಯಾಪ್ರವೀಣ ಶ್ರೀ|| ಕೆ.ಜಿ. ಸುಬ್ರಾಯಶರ್ಮರು)

ಚತುರ್ದಶೀವ್ರತಗಳಲ್ಲಿ ಈಗ ನರಕಚತುರ್ದಶೀವ್ರತವನ್ನು ವಿಚಾರಮಾಡ ಬೇಕಾಗಿದೆ. ಇದು ಆಶ್ವಯುಜ ಬಹುಳ ಚತುರ್ದಶೀದಿನದಿಂದ ಮೂರು ದಿನಗಳ ಕಾಲ ಆಚರಿಸಲ್ಪಡುತ್ತದೆ. ಇದು ಸಾಮಾನ್ಯವಾಗಿ 'ದೀಪಾವಳಿಹಬ್ಬ'ವೆಂದು ಈಗ ರೂಢಿಯಲ್ಲಿದೆ. ಚತುರ್ದಶಿಯ ದಿನ ಅಭ್ಯಂಗಸ್ನಾನವನ್ನು ಮಾಡಿ ಮೊದಲನೇ ಹಬ್ಬವನ್ನು ನಮ್ಮಲ್ಲಿ ಆಚರಿಸುತ್ತಾರೆ. ಆದರೆ ಈ ಹಬ್ಬದ ವಿಷಯಕ್ಕೆ ವ್ರತ ನಿಂಬಂಧಗಳಲ್ಲಿ ಹೇಳಿರುವ ವಿಶೇಷವಿಷಯಗಳು ಬಹುಜನರಿಗೆ ಗೊತ್ತಿರಲಾರದು. ಆದ್ದರಿಂದ ಅವುಗಳೇನೆಂಬುದನ್ನು ವಿಚಾರಮಾಡೋಣ.

ಉಷಃಕಾಲಕ್ಕೆ ಚತುರ್ದಶೀತಿಥಿವ್ಯಾಪಿನಿಯಿರುವ ಆಶ್ವಿನಕೃಷ್ಣಚತುರ್ದಶಿ ಯಂದು ಬೆಳಗಿನಝಾವದಲ್ಲಿ ತೈಲಾಭ್ಯಂಗವನ್ನು ಮಾಡಿಕೊಳ್ಳಬೇಕು. ಹಾಗೆ ಮಾಡಿಕೊಳ್ಳುವದರಿಂದ ಇಡಿಯ ವರ್ಷವೆಲ್ಲ ಮಾಡಿರಬಹುದಾದ ಪಾಪಗಳು ನಾಶ ವಾಗುವವು. ಎಣ್ಣೆಯಲ್ಲಿ ಮಹಾಲಕ್ಷ್ಮಿಯೂ ನೀರಿನಲ್ಲಿ ಗಂಗೆಯೂ ದೀಪಗಳ ಸಾಲಿನಲ್ಲಿ ಶಿವನೂ ಸನ್ನಿಹಿತರಾಗಿರುವರು. ಆದ್ದರಿಂದ ತೈಲಾಭ್ಯಂಗವನ್ನು ಅವಶ್ಯ ವಾಗಿ ಮಾಡಿಕೊಳ್ಳಬೇಕು. ತಲೆಯಮೇಲೆ ಉತ್ತರಣೆಯ ಎಲೆಗಳಿಂದ ನರಕನಾಶ ಕ್ಕಾಗಿ ಸವರಿಕೊಳ್ಳಬೇಕು. ಅನಂತರ ಯಮದೇವನಿಗೆ ತರ್ಪಣವನ್ನು ಮಾಡ ಬೇಕು. ಯಮದೇವನ ಹದಿನಾಲ್ಕು ನಾಮಗಳಿಂದ ಈ ಕರ್ಮವನ್ನು ನೆರವೇರಿಸ ಬೇಕು. ಅವು ಹೀಗಿವೆ : (೧) ಯಮಾಯ (೨) ಧರ್ಮರಾಜಾಯ (೩) ಮೃತ್ಯವೇ (೪) ಅಂತಕಾಯ (೫) ವೈವಸ್ವತಾಯ (೬) ಕಾಲಾಯ (೭) ಸರ್ವ ಭೂತಕ್ಷಯಾಯ (೮) ಔದುಂಬರಾಯ (೯) ಚಿತ್ರಾಯ (೧೦) ನೀಲಾಯ (೧೧) ಪರಮೇಷ್ಠಿನೇ (೧೨) ವೃಕೋದರಾಯ (೧೩) ರುದ್ರಾಯ (೧೪) ಚಿತ್ರಗುಪ್ತಾಯ –ಎಂಬೀ ಚತುರ್ದಶನಾಮಗಳಿಂದ ಚತುರ್ದಶೀದಿನ ಯಮನನ್ನು ಸಂತೃಪ್ತಿಗೊಳಿಸ ಬೇಕು. ಕೆಲವರು ಯಮತರ್ಪಣವನ್ನು ಜೀವತ್‌ಪಿತೃಕರು (ತಂದೆಯುಳ್ಳ ವರು) ಮಾಡಬಹುದೆ? ಎಂದು ಸಂಶಯಪಡುತ್ತಾರೆ. ಅದಕ್ಕೆ ನಿಬಂಧಕಾರರು ಈ ಉತ್ತರವನ್ನು ಕೊಟ್ಟಿದ್ದಾರೆ. ಕೇಳಿರಿ :–

**ಯಜ್ಞೋಪವೀತಿನಾ ಕಾರ್ಯಂ ಪ್ರಾಚೀನಾವೀತಿನಾ ತಥಾ ।**
**ದೇವತ್ವಂ ಚ ಪಿತೃತ್ವಂ ಚ ಯಮಸ್ಯಾಸ್ತಿ ದ್ವಿರೂಪತಾ ।**
**ಜೀವತ್‌ಪಿತಾಪಿ ಕುರ್ವೀತ ತರ್ಪಣಂ ಯಮಭೀಷ್ಮಯೋಃ ॥**

ಯಮನಿಗೆ ದೇವತ್ವವೂ ಪಿತೃತ್ವವೂ ಎರಡೂ ಉಂಟು. ಆದ್ದರಿಂದ ಯಮ ನಿಗೂ ಭೀಷ್ಮನಿಗೂ ತಂದೆಯುಳ್ಳವನೂ ತರ್ಪಣಮಾಡಬೇಕು. ಹಾಗೆ ಮಾಡು ವಾಗ ತಂದೆಯುಳ್ಳವನು ಉಪವೀತದಿಂದಲೂ ಇಲ್ಲದವನು ಪ್ರಾಚೀನಾವೀತದಿಂದ ಲೂ ಮಾಡಬೇಕು– ಹೀಗೆಂದು ತಿಳಿಸಲಾಗಿದೆ. ಆದ್ದರಿಂದ ಸರ್ವರೂ ಯಮ ತರ್ಪಣವನ್ನು ಮಾಡಬೇಕೆಂದೇ ಶಾಸ್ತ್ರಕಾರರ ಅಭಿಪ್ರಾಯವಿದೆ.

ನರಕಚತುರ್ದಶಿಯಿಂದ ಆರಂಭವಾಗುವ ಮೂರು ದಿನಗಳ ಹಬ್ಬಗಳಲ್ಲಿ ಮೊದಲನೆಯ ದಿನದಿಂದಲೇ ದೀಪಾವಳಿ (ದೀಪದ ಸಾಲುಗಳು)ಗಳನ್ನು ಬೆಳಗ ಬೇಕು- ಎಂದು ತಿಳಿಸಿರುತ್ತದೆ. ಏಕೆಂದರೆ ಬಲಿರಾಜನು ಮಹಾವಿಷ್ಣುವಿನಲ್ಲಿ ಆ ರೀತಿಯಾಗಿ ವರವನ್ನು ಬೇಡಿಕೊಂಡಿರುತ್ತಾನೆ. ಹಿಂದೆ ಬಲಿರಾಜನನ್ನು ಮಹಾ ವಿಷ್ಣುವು ವಾಮನನಾಗಿ ಅವತರಿಸಿ ಮೆಟ್ಟುವಾಗ ಚತುರ್ದಶಿಯಿಂದ ಮೂರು ದಿನಗಳ ಕಾಲ ಲೋಕತ್ರಯಗಳನ್ನು ತ್ರಿವಿಕ್ರಮನಾಗಿ ವ್ಯಾಪಿಸಿಕೊಂಡನಂತೆ. ಬಲಿಯ ಭೂದಾನದಿಂದ ತೃಪ್ತನಾದ ನಾರಾಯಣನು 'ವರವನ್ನು ಬೇಡಿಕೊ'ಎಂದು ಬಲಿರಾಜನಿಗೆ ತಿಳಿಸಿದಾಗ ಆತನು "ದೇವ, ನನಗೇನೂ ವರಗಳು ಬೇಡ; ಏಕೆಂದರೆ ನೀನು ನನಗೆ ಕೊಡಬೇಕಾದದ್ದನ್ನೆಲ್ಲ ಕೊಟ್ಟೇಇರುವೆ. ಆದರೆ ಲೋಕಾನುಗ್ರಹ ಕ್ಕಾಗಿ ವರವನ್ನು ಬೇಡುತ್ತೇನೆ. ನೀನು ಮೂರು ಪಾದಗಳಿಂದ ಮೂರು ದಿನಗಳ ಕಾಲ ಮೂರು ಲೋಕಗಳನ್ನೂ ಅಳತೆಮಾಡಿರುವೆಯಾದ್ದರಿಂದ ಈ ಮೂರು ದಿನಗಳೂ ನನ್ನ ಹೆಸರಿನಲ್ಲಿ ತ್ರೈಲೋಕ್ಯರಾಜ್ಯದ ಪ್ರಜೆಗಳೂ ಸಂತೋಷವಾಗಿ ಹಬ್ಬವನ್ನು ಆಚರಿಸಲಿ. ಮೂರು ದಿನಗಳಮಟ್ಟಿಗೆ ನಾನು ಪ್ರತಿವರ್ಷವೂ ಇಂದ್ರ ನಾಗಿ ತ್ರೈಲೋಕ್ಯರಾಜ್ಯವನ್ನಾಳುವೆನು. ನನ್ನ ರಾಜ್ಯವಿರುವಾಗ ಯಾರು ದೀಪ ದಾನಗಳನ್ನು ಮಾಡುವರೋ ಅಂಥವರ ಮನೆಗಳಲ್ಲಿ ನಿನ್ನ ಸ್ತ್ರೀಯಾದ ಮಹಾ ಲಕ್ಷ್ಮಿಯು ವಾಸಮಾಡಲಿ. ಆದರೆ ಈ ಸಮಯದಲ್ಲಿ ಯಾರ ಮನೆಗಳು ದೀಪ ಗಳಿಲ್ಲದೆ ಕತ್ತಲೆಯಲ್ಲಿರುವವೋ ಅಂಥವರ ಮನೆಗಳನ್ನು ಅಲಕ್ಷ್ಮಿಯು ಆಶ್ರಯಿಸಲಿ. ಇನ್ನು ಚತುರ್ದಶಿಯ ದಿನ ದೀಪದಾನವನ್ನು ಮಾಡುವವರ ಪಿತೃಗಳೆಲ್ಲರೂ ನರಕ ದಿಂದುದ್ಧಾರವಾಗಿ ಸ್ವರ್ಗವನ್ನು ಪಡೆಯಲಿ!" ಎಂದು ವರವನ್ನು ಬೇಡಿಕೊಂಡನು. ಅದರಂತೆಯೇ ಮಹಾವಿಷ್ಣುವು ವರಗಳನ್ನು ದಯಪಾಲಿಸಿದನು. ಆದ್ದರಿಂದ ನರಕ ಚತುರ್ದಶೀ ದಿನದಿಂದಲೂ ದೀಪಾವಳಿಯನ್ನು ಆಚರಿಸಬೇಕು.

ಇನ್ನು ಬಲಿಚಕ್ರವರ್ತಿಯ ರಾಜ್ಯದ ವೈಶಿಷ್ಟ್ಯಗಳನ್ನೂ ಹೀಗೆ ತಿಳಿಸಿದ್ದಾರೆ. ಕಲ್ಲುಗಳೆಲ್ಲ ರತ್ನಗಳಾಗಿರುವವು. ಹುಲ್ಲುಗಳೂ ರಾಜಾನ್ನವಾಗಿರುವವು. ಗೋವು ಗಳು ಸಮೃದ್ಧವಾಗಿ ಹಾಲನ್ನು ಕೊಡುವವು. ದೇವತೆಗಳೂ ಯಕ್ಷಗಂಧರ್ವ ಕಿನ್ನರಾದಿಗಳೂ ಸಂತುಷ್ಟರಾಗಿರುವರು. ಮಣಿಮಂತ್ರೌಷಧಿಗಳೆಲ್ಲವೂ ಈ ಕಾಲದಲ್ಲಿ ಸಿದ್ಧಿಸುವವು. ಆಯಾ ಮಂತ್ರದೇವತೆಗಳೂ ಪುರಶ್ಚರಣಾದಿಗಳಿಂದ ಒಲಿಯುವರು. ಹೀಗೆ ಮಹಾಭಾಗವತೋತ್ತಮನಾದ ಬಲಿರಾಜನ ರಾಜ್ಯದಲ್ಲಿ ಸರ್ವವೂ ಸುಖ ಮಯವಾಗಿರುವದು. ಇಂಥ ಮಹಿಮೆಯುಳ್ಳ ನರಕಚತುರ್ದಶೀ ಆಚರಣೆಯನ್ನು ಎಲ್ಲರೂ ಮಾಡಬೇಕೆಂದು ಶಾಸ್ತ್ರಕಾರರು ತಿಳಿಸಿದ್ದಾರೆ. ಭಕ್ತನಾದವನು ರಾಜ್ಯ ವಾಳುತ್ತಿದ್ದರೆ ಭಕ್ತಪರಾಧೀನನಾದ ಭಗವಂತನ ಅನುಗ್ರಹದಿಂದ ಜೀವರುಗಳೆಲ್ಲರೂ ಸುಖವನ್ನು ಹೊಂದುವರೆಂದು ಈ ವ್ರತದ ಮಹಿಮೆಯಿಂದ ತಿಳಿಯಬಹುದಾಗಿದೆ.

---

# ಜಿಜ್ಞಾಸುಗಳ ಪ್ರಶ್ನೆಗಳಿಗೆ ಉತ್ತರಗಳು

**ಪ್ರಶ್ನೆ :** ಎಚ್ಚರದವಸ್ಥೆಯಲ್ಲಿ ಜೀವನು ಮಾಡುವ ಕರ್ಮಗಳಿಗೆ ಎಚ್ಚರದ ಜೀವನು ಹೊಣೆಗಾರನು. ಹಾಗೆಯೇ ಕನಸಿನಲ್ಲಿ ಜೀವನು ಮಾಡುವ ಕರ್ಮಗಳಿಗೆ ಯಾರು ಜವಾಬ್ದಾರರು? ಕನಸಿನ ನಾನು, ಎಚ್ಚರದ ನಾನು ಬೇರೆಬೇರೆಯಲ್ಲವೆ ?

**ಉತ್ತರ :** 'ನಾನು' ಎಂಬ ಪ್ರಮಾತೃವು ಆಯಾ ಅವಸ್ಥೆಗಳಿಗೆ ಬೇರೆ ಬೇರೆಯೇ ಎಂಬಿದು ಸರಿ. ಆದ್ದರಿಂದಲೇ ಎಚ್ಚರದ ಪ್ರಮಾತೃವು ಕನಸಿನ ಕಾರ್ಯ ಗಳಿಗೆ ಜವಾಬ್ದಾರನಾಗುವದಿಲ್ಲ. ಕನಸಿನಲ್ಲಿ ಮಾಡಿದ ಎಲ್ಲಾ ಪುಣ್ಯಪಾಪಗಳಿಗೂ ಕನಸಿನ ಪ್ರಮಾತೃವೇ ಹೊಣೆಗಾರನು. ಆದರೆ ಒಂದೇ ಶರೀರದಲ್ಲಿ 'ಇಬ್ಬರು ನಾನು'ಗಳು ಇರುವದು ಅನುಭವವಿರುದ್ಧವಾದ್ದರಿಂದ ಎರಡು ಅವಸ್ಥೆಗಳಿಗೂ ಸಾಕ್ಷಿಯಾಗಿದ್ದು ಆಯಾ ಕಾಲಕ್ಕೆ ಪ್ರಮಾತೃವೆನಿಸಿಕೊಳ್ಳುವ ಆತ್ಮನನ್ನೇ ನಾವು ಗುರುತಿಸಿ ಅರಿತುಕೊಳ್ಳಬೇಕು. ಇದರಿಂದ ಎರಡೂ ಅವಸ್ಥೆಗಳ ಸಂಬಂಧವಾಗಲಿ, ಆಯಾ ಅವಸ್ಥೆಗಳಲ್ಲಿ ಸಂಭವಿಸಿದ ಪಾಪಪುಣ್ಯಗಳಾಗಲಿ ದ್ರಷ್ಟೃವಾದ ಪ್ರತ್ಯಗಾತ್ಮ ನಿಗೆ ಇಲ್ಲವೆಂದೇ ಆಗಿ ಆತ್ಮನ ಅಸಂಗತ್ವವೇ ಸಿದ್ಧವಾಗುವದು. ಜೀವನ ಜೀವತ್ವವು ಅವಸ್ಥಾಬದ್ಧವೆಂದೇ ಆಗಿ, ಅವಸ್ಥೆಗಳು ಒಂದನ್ನೊಂದು ಬಾಧಿಸುವದರಿಂದ ನಮ್ಮ ಆತ್ಮನಿಗೆ ಜೀವತ್ವವು ಕಲ್ಪಿತವೆಂದೇ ತೀರ್ಮಾನವಾಗುವದು. ಇದೇ ವೇದಾಂತ ಸಮ್ಮತವಾದ ಅಭಿಪ್ರಾಯವು.

**ಪ್ರಶ್ನೆ :** ಈಚೆಗೆ ಟಿ. ವಿ. ಯಲ್ಲಿ ನೀರಿನಲ್ಲಿಯೇ ಇದ್ದುಕೊಂಡು ನೋಡುವ ಪ್ರಾಣಿಗಳನ್ನು ತೋರಿಸಿದರು. ಇಂಥವುಗಳನ್ನು ಹಿಂದೆ ನಾನೆಂದೂ ನೋಡಿರಲಿಲ್ಲ. ಹೀಗೆ ಎಚ್ಚರದ ಪ್ರಮಾತೃವಿಗೆ ಹೊಸಹೊಸ ಅನುಭವಗಳಾದಂತೆಲ್ಲ ಅವುಗಳೇ ಕನಸಿನಲ್ಲಿಯೂ ಕಾಣಬಹುದಾಗುತ್ತವೆ. ಎಚ್ಚರದ ಪ್ರಮಾತೃವಿಗೆ ಎಂದೂ ಗೊತ್ತಿಲ್ಲದ ದೃಶ್ಯಗಳಾಗಲಿ, ವಿಷಯಗಳಾಗಲಿ, ಕನಸಿನಲ್ಲಿ ಕಾಣಲಾರವೆಂದು ನನ್ನ ಅಭಿಪ್ರಾಯವಿದೆ. ಇದು ಸರಿಯೆ ?

**ಉತ್ತರ :** ಯಾವಾಗಲೂ ನಮಗೆ ಎಚ್ಚರದೃಷ್ಟಿಯೇ ಪ್ರಧಾನವಾಗಿದ್ದು ಅದರ ಕಡೆಗೇ ಹೆಚ್ಚು ಪಕ್ಷಪಾತವಿರುವದರಿಂದ ವ್ಯಾವಹಾರಿಕದೃಷ್ಟಿಯಲ್ಲಿ ನಿಮ್ಮ ಅಭಿಪ್ರಾಯದಂತೆ ಎಚ್ಚರದ ಅನುಭವದ ವಾಸನೆಗಳಿಂದಲೇ ಬಹಳಮಟ್ಟಿಗೆ ಕನಸಿನ ದೃಶ್ಯಗಳನ್ನೂ ಕಾಣುತ್ತೇವೆಂದು ಒಪ್ಪಬಹುದು. ಆದರೆ ಅನುಭವ, ಅದರ ಸಂಸ್ಕಾರ (ವಾಸನೆ) ಎರಡಕ್ಕೂ ಒಂದೇ ಕಾಲದ ಆಧಾರವು ಬೇಕು. ನೀವು ಅದನ್ನು ತೋರಿಸಿದರೆ ನಿಮ್ಮ ತರ್ಕವು ಪೂರ್ಣವಾಗಿ ಸರಿಯೆನ್ನಬಹುದು. ನಿಜ ವೇನೆಂದರೆ: ಎಚ್ಚರದ ಅನುಭವದ ಸಂಸ್ಕಾರವು ಎಚ್ಚರದಲ್ಲಿ ಮಾತ್ರ ಚಲಾವಣೆ ಯಲ್ಲಿರಬಹುದೇ ಹೊರತು ಕನಸಿಗೆ ಅದು ಬರುವದು ಹೇಗೆ ಸಾಧ್ಯ ? ಕನಸಿನಲ್ಲಿ ಕಾಣುವ ದೇಶಕಾಲಗಳೇ ಬೇರೆಯಲ್ಲವೆ ? ಆದ್ದರಿಂದ ಎಚ್ಚರದ ಪ್ರಮಾತೃವಿನ

ಅನುಭವ– ಸಂಸ್ಕಾರಗಳೇನೇ ಇರಲಿ, ಅವು ಕನಸಿನ ಪ್ರಮಾತೃವಿಗೆ ಎಂದಿಗೂ ವಿಷಯವಾಗಲಾರವು. ಹಾಗೆಯೇ ಕನಸಿನ ಪ್ರಮಾತೃವಿನ ಅನುಭವಸಂಸ್ಕಾರಗಳೂ ಎಚ್ಚರದ ಪ್ರಮಾತೃವಿನ ಅರಿವಿಗೆ ವಿಷಯವಾಗಲಾರವು. ಇನ್ನು ಎಚ್ಚರದಂತೆಯೇ ಕನಸಿನಲ್ಲೂ ಕಂಡೆನು– ಎಂಬುದು 'ಕಾಣುವ ಆತ್ಮನು ಒಬ್ಬನೇ' ಎಂಬಿದನ್ನು ಸ್ಥಿರಗೊಳಿಸುತ್ತದೆ. ಈ ಆತ್ಮನಿಗೆ ಎಚ್ಚರಕನಸುಗಳೆಂಬ ಉಪಾಧಿಗಳು ಬಂದೂಹೋಗೀ ಮಾಡುತ್ತವೆಯೆಂದೂ ಉಪಹಿತನಾದ ಆತ್ಮನು ನಿತ್ಯನೆಂದೂ ಸಿದ್ಧವಾಗುತ್ತದೆ. ಇಷ್ಟೇ ಅಲ್ಲ. ಎಚ್ಚರದಲ್ಲಿ ಎಂದೆಂದಿಗೂ ಅನುಭವಿಸದೆ ಇದ್ದಂಥ ಅನುಭವಗಳೂ ಕನಸಿನ ಪ್ರಭಾವದಿಂದ ಆಗ್ಗೆ ಕಂಡುಬರಬಹುದು. ಉದಾಹರಣೆಗೆ ನಾಲ್ಕು ದಂತಗಳುಳ್ಳ ಬಿಳಿಯಾನೆಯಮೇಲೆ ತಾನು ಸವಾರಿಮಾಡಿದಂತೆಯೂ ಎಚ್ಚರದಲ್ಲಿ ಭಿಕ್ಷುಕನಾಗಿದ್ದವನಿಗೂ ಕನಸಿನಲ್ಲಿ ಸಿಂಹಾಸನದಮೇಲೆ ಕುಳಿತಿದ್ದಂತೆಯೂ ಕಾಣಬಹುದು. ಆದ್ದರಿಂದ ನೀವು 'ಎಚ್ಚರದ ನಾನು' ಎಂಬ ಅನುಭವವನ್ನು ಎಚ್ಚರದಲ್ಲಿಯೇ ಇದ್ದುಕೊಂಡು ಪರೀಕ್ಷಿಸಲು ಹೋಗಬಾರದು. ಏಕೆಂದರೆ ಎಚ್ಚರಕ್ಕಿಂತ 'ನಾನೇ' ದೊಡ್ಡದು. ಅದನ್ನು ಅಲ್ಲಿಯೇ ಪರೀಕ್ಷಿಸಲು ಹೋದರೆ ಅದು ತಪ್ಪಾಗುವದು. ಸಾಕ್ಷಿದೃಷ್ಟಿಯಿಂದ ಮಾತ್ರ 'ನಾನು' ಎಂಬುದಿರುವ ಹಾಗೂ ಇಲ್ಲದಿರುವ ಎಲ್ಲಾ ಅವಸ್ಥೆಗಳನ್ನೂ ಅಳೆಯಬಹುದು. ಅದು ನಿಜವಾಗಿ ತುರೀಯವೇ ಆಗಿರುವದು. ಅದು ತಿಳಿದಾಗ ಯಾವ ಸಂಶಯಗಳೂ ಉಳಿಯುವದಿಲ್ಲ.

**ಪ್ರಶ್ನೆ :** ಎಚ್ಚರ, ಕನಸು, ನಿದ್ರೆಗಳನ್ನು– ಶಾಸ್ತ್ರವು ಬಳಸಿರುವದು ಆತ್ಮನನ್ನು ತಿಳಿಸುವದಕ್ಕೆಂದೇ– ಎಂದು ನನಗೆ ಮನದಟ್ಟಾಗಿದೆ. ಇದನ್ನು ಎಷ್ಟರಮಟ್ಟಿಗೆ ಬಳಸಬೇಕೆಂಬುದನ್ನು ತಿಳಿಸಬಲ್ಲಿರಾ ?

**ಉತ್ತರ :** ಶಾಸ್ತ್ರವು ಅವಸ್ಥಾತ್ರಯಾನುಭವವನ್ನೇ ಆತ್ಮದರ್ಶನಕ್ಕೆ ಮಹಾತರ್ಕವಾಗಿ ಬಳಸಿರುವದೇಕೆಂದರೆ ಇವು ಸಾರ್ವತ್ರಿಕಾನುಭವಗಳಾಗಿವೆ. ಯೋಗ, ಸಮಾಧಿಗಳಂತೆ ವೈಯಕ್ತಿಕಾನುಭವಗಳಲ್ಲ. ಆದರೆ ವೇದಾಂತಿಗಳನ್ನು ಬಿಟ್ಟರೆ ಮಿಕ್ಕ ದರ್ಶನಕಾರರುಗಳೂ ಕೆಲವರು ಆತ್ಮಸ್ವರೂಪವನ್ನು ವಿಚಾರಮಾಡಲು ಹೊರಟು ಕೇವಲ ಜಾಗ್ರದ್ದೃಷ್ಟಿಯನ್ನೇ ಅವಲಂಬಿಸಿದ್ದರ ಫಲವಾಗಿ ದ್ವೈತಿಗಳಾಗಿಯೇ ಉಳಿದುಕೊಂಡು ಪರಸ್ಪರ ವಿರುದ್ಧಾಭಿಪ್ರಾಯಗಳಲ್ಲಿಯೇ ನಿಂತುಬಿಟ್ಟಿದ್ದಾರೆ. ವೇದಾಂತಿಗಳಾದರೊ, ಪೂರ್ಣದೃಷ್ಟಿಯನ್ನು ಅವಲಂಬಿಸಿ– ಎಂದರೆ ಅವಸ್ಥಾತ್ರಯಗಳಲ್ಲಿಯೂ ಆತ್ಮಸ್ವರೂಪವು ಹೇಗೆ ಅನುಭವಕ್ಕೆ ಬರುವದೆಂಬುದನ್ನು ಚೆನ್ನಾಗಿ ಪರಿಶೀಲಿಸಿ ನಿರ್ವಿಶೇಷಾದ್ವಿತೀಯ ಸಚ್ಚಿದಾನಂದತತ್ತ್ವವೇ ಸಕಲ ಜಗತ್ತಿನ, ಸಮಸ್ತಜೀವರ ತಿರುಳು– ಎಂದು ಕಂಡುಕೊಂಡಿರುತ್ತಾರೆ. ಆದ್ದರಿಂದ ವೇದಾಂತದರ್ಶನಕಾರರು ಯಾವ ಕ್ರಮ(ಪ್ರಕ್ರಿಯೆ)ದಿಂದ ಅವಸ್ಥೆಗಳನ್ನು ಪರಿಶೀಲಿಸಿರುವರೋ ಅದೇ ರೀತಿಯಾಗಿ ನೀವೂ ಮನನಮಾಡಿ ಕೃತಾರ್ಥರಾಗಿರಿ.

# ಧರ್ಮಶಾಸ್ತ್ರವೂ ಮೋಕ್ಷಶಾಸ್ತ್ರವೂ

[ 'ಅಧ್ಯಾತ್ಮಪ್ರಕಾಶ'ದ ಸಂಪಾದಕರಿಗೆ ತುಮಕೂರಿನ ಮಹಿಳಾವಾಚಕರೊಬ್ಬರು ತಾ॥ 13–3–83 ರಂದು ಬರೆದಿದ್ದ ಪತ್ರಕ್ಕೆ ಉತ್ತರರೂಪವಾಗಿ ಈ ಲೇಖನವನ್ನು ಪ್ರಕಟಿಸಿದೆ. ವಾಚಕರ ಸಂಶಯವನ್ನೂ ಕೊಡಲಾಗಿದೆ. ]

"ನಾನೊಬ್ಬ ಹೆಂಗಸು. ಬಹಿಷ್ಠೆಯಾದಾಗ ಹೆಂಗಸರು ಧರ್ಮಗ್ರಂಥಗಳನ್ನು ಓದುವದೂ ಬೇರೆಯವರು ಓದುವದನ್ನು ಕೇಳುವದೂ ಸ್ತೋತ್ರಗಳು ಹಾಗೂ ದೇವರ ನಾಮಗಳನ್ನು ಹಾಡಿಕೊಳ್ಳುವದೂ ನಿಷಿದ್ಧವೆಂದು ಕೇಳಿದ್ದೇನೆ. ಮನೆಗೆಲಸ, ಪತಿ ಹಾಗೂ ಮಕ್ಕಳುಮರಿಗಳ ಶುಶ್ರೂಷೆಯಲ್ಲಿ ತೊಡಗುವ ನನಗೆ ಉಳಿದ ದಿನಗಳಲ್ಲಿ ಹೆಚ್ಚು ವಿರಾಮವು ದೊರೆಯುವದಿಲ್ಲ. ನನಗೆ ಓದುವದರಲ್ಲಿ ಆಸಕ್ತಿ ಹೆಚ್ಚು. ಹಾಗಾಗಿ ನಾನು ಬಹಿಷ್ಠೆಯಾದಾಗ ಹೆಚ್ಚು ಓದುತ್ತೇನೆ. ಆಗ ನಿರಾಳವಾಗಿ ವಿಷಯಗಳನ್ನು ಮನನಮಾಡಿಕೊಳ್ಳಲು ಅನುಕೂಲವಾಗುವಂತೆ ಬೇರೆ ದಿನಗಳಲ್ಲಿ ಸಾಧ್ಯವಿಲ್ಲ. ನಾನು ಮಾಡುತ್ತಿರುವದು ಸರಿಯೆ ? ತಪ್ಪೆ ? ತಿಳಿಸಿ"

ಸೃಷ್ಟಿಯಲ್ಲಿ ಗಂಡಸು-ಹೆಂಗಸು ಎಂಬ ವಿಭಾಗವು ಅನಿವಾರ್ಯವಾದುದು. ಸೃಷ್ಟಿಕರ್ತನು ತಾನೊಬ್ಬನೇ ಮೊದಲಿದ್ದಾಗ ತನ್ನ ಕಾರ್ಯವು ಸಾಧ್ಯವಾಗದೆ ಹೋಗಲಾಗಿ ತನ್ನನ್ನೇ ಪತಿ-ಪತ್ನಿಯನ್ನಾಗಿ ವಿಭಾಗಮಾಡಿಕೊಂಡನೆಂದೂ ಪತಿಪತ್ನಿಯರೆಂಬವರು ಒಂದು ಕಾಳಿನ ಎರಡು ಬೇಳೆಗಳಿದ್ದಂತೆ– ಎಂದೂ ಉಪನಿಷತ್ತಿನಲ್ಲಿ ತಿಳಿಸಿದೆ. ಆದ್ದರಿಂದ ಸೃಷ್ಟಿಕರ್ತನ ದೃಷ್ಟಿಯಿಂದ ಸ್ತ್ರೀಪುರುಷರು ಸರಿಸಮಾನರು. ಇನ್ನು ಜಗತ್‌ಸೃಷ್ಟಿಯ ಕಾರ್ಯಕ್ಕೆ ಅನುಕೂಲವಾಗುವಂತೆ ಸ್ತ್ರೀಪುರುಷರ ಶರೀರರಚನೆಯು ಭಿನ್ನಭಿನ್ನವಾಗಿದ್ದರೂ ಆತ್ಮನು ಸ್ತ್ರೀಗೂ ಪುರುಷನಿಗೂ ಒಬ್ಬನೇ ಆಗಿದ್ದಾನೆ. ಅವನಲ್ಲಿ ಲಿಂಗಭೇದವಿಲ್ಲ. ಆತ್ಮನನ್ನು ಕಂಡುಕೊಂಡು ಜ್ಞಾನದ ಮೂಲಕ ಮೋಕ್ಷವನ್ನು ಪಡೆಯಲು ಪುರುಷನಷ್ಟೇ ಸ್ತ್ರೀಗೂ ಅಧಿಕಾರವಿದೆ. ವಿವಾಹಕಾಲದಲ್ಲಿಕೂಡ ಧರ್ಮಾರ್ಥಕಾಮಗಳ ಬಗ್ಗೆ ಮಾತ್ರ ಪರಸ್ಪರ ಒಪ್ಪಂದವಾಗಿರುತ್ತದೆಯೇ ಹೊರತು ಮೋಕ್ಷಕ್ಕೆ ಅದು ಅನ್ವಯಿಸುವದಿಲ್ಲ. ಗಂಡಸಾಗಲಿ ಹೆಂಗಸಾಗಲಿ ಮೋಕ್ಷೇಚ್ಛೆಯುಳ್ಳವರು ಒಬ್ಬರನ್ನೊಬ್ಬರು ಕೈಬಿಟ್ಟರೆ ಅಧರ್ಮವು ಸೋಂಕುವದಿಲ್ಲ.

ಈ ಹಿನ್ನೆಲೆಯಲ್ಲಿ ವಿಚಾರಮಾಡಿದಾಗ ಮೋಕ್ಷಶಾಸ್ತ್ರವು ಎಲ್ಲ ವ್ಯಕ್ತಿಗಳಿಗೂ ಎಲ್ಲಾ ಕಾಲಕ್ಕೂ ಅನ್ವಯಿಸುವಂತೆಯೇ ಸಾಧನಗಳನ್ನು ಉಪದೇಶಿಸಿರುತ್ತದೆ. ಸಾಧಕರು ಬ್ರಹ್ಮಚಿಂತನೆಯನ್ನೂ ಜಿಜ್ಞಾಸೆಯನ್ನೂ ಮಾಡಲು ಯಾವಾಗಲೂ ಯಾವ ಅಡ್ಡಿಯೂ ಇರುವದಿಲ್ಲ. ಇಷ್ಟೇ ಅಲ್ಲದೆ ಒಮ್ಮೆ ಬ್ರಹ್ಮಚಿಂತನೆಯ ಕಡೆಗೆ ಮನಸ್ಸು ಒಲಿಯಿತೆಂದರೆ ಅದನ್ನು ಹಿಂದಿರುಗಿಸುವದೂ ಸಾಧ್ಯವಿಲ್ಲ. ಅವಶ್ಯವೂ

ಇಲ್ಲ. ಆದ್ದರಿಂದ ನೀವು ಬಹಿಷ್ಠೆಯಾದಾಗಲೂ ಮಾನಸಿಕವಾಗಿ ದೇವರ ಸ್ತೋತ್ರಗಳನ್ನು ಹೇಳಿಕೊಳ್ಳುವದಾಗಲಿ ಗ್ರಂಥಗಳನ್ನು ಓದುವದಾಗಲಿ ತಪ್ಪಾಗಲಾರದು.

ಈಗ ಧರ್ಮಶಾಸ್ತ್ರಗಳ ಕಡೆಗೆ ತಿರುಗೋಣ. ಧರ್ಮವೆಂಬುದು ಆಚಾರದಲ್ಲಿ ಅವರವರ ಇಷ್ಟಾನುಸಾರವಾಗಿದ್ದು ಹೃದಯಕ್ಕೆ ಮೆಚ್ಚಾಗಿಯೂ ಶ್ರುತಿಗೆ ಅನುಗುಣವಾಗಿಯೂ ಇರುತ್ತದೆ. ಮೋಕ್ಷವು ಧರ್ಮಾಧರ್ಮಗಳ ಎಲ್ಲೆಯನ್ನೇ ಮೀರಿರುವದರಿಂದ ನಿಜವಾಗಿ ಮುಕ್ತನು ಧರ್ಮಾತೀತನಾಗಿರುತ್ತಾನೆ. ಅದು ಹಾಗಿರಲಿ. ಸಾಧಕರ ದೃಷ್ಟಿಯಿಂದ ವಿಚಾರಮಾಡುವಾಗ ಯಾರು ಇನ್ನೂ ಧರ್ಮಕರ್ಮಗಳ ಎಲ್ಲೆಯನ್ನು ಮೀರಿದ ಬ್ರಹ್ಮನಿಷ್ಠರಾಗಿರುವದಿಲ್ಲವೋ ಅಂಥವರು ಧರ್ಮದ ಕಟ್ಟುಪಾಡುಗಳಿಗೆ ಒಳಪಡುವದೇ ಶ್ರೇಯಸ್ಕರವು. ನೂರಕ್ಕೆ ತೊಂಭತ್ತು ಜನರು ಇಂಥವರಾಗಿರುವದರಿಂದ ಧರ್ಮಶಾಸ್ತ್ರಗಳು ಯಾರಿಗೂ ಅನ್ಯಾಯವಾಗದಂತೆ ಗಂಡಸರಿಗೂ ಹೆಂಗಸರಿಗೂ ಕೆಲವು ನಿಯಮಗಳನ್ನು ವಿಧಿಸಿರುತ್ತವೆ. ಇಂಥವುಗಳಲ್ಲಿ ಸ್ತ್ರೀಯರಿಗೆ ಅನ್ವಯಿಸುವಂತೆ– ಎಂದರೆ ಅವರ ಸ್ವಾಭಾವಿಕಶರೀರರಚನೆ– ಹಾಗೂ ಮಾನಸಿಕ ಸಾಮರ್ಥ್ಯಗಳ ದೃಷ್ಟಿಯಿಂದ ಕೆಲವು ಸಂದರ್ಭಗಳಲ್ಲಿ ಅಧ್ಯಯನಾದಿಗಳ ವಿಷಯಕ್ಕೂ ವೈದಿಕಕರ್ಮಗಳ ವಿಷಯಕ್ಕೂ ನಿರ್ಬಂಧಗಳನ್ನು ಹೇರಿರುತ್ತವೆ. ಶಾಸ್ತ್ರವೆಂದ ಮೇಲೆ ಮೋಕ್ಷಶಾಸ್ತ್ರವೂ ಧರ್ಮಶಾಸ್ತ್ರವೂ ಎರಡೂ ಭಗವಂತನ ಅಪ್ಪಣೆಗಳೇ ಆದ್ದರಿಂದ ಎರಡನ್ನೂ ನಾವು ಗೌರವಿಸಲೇಬೇಕು. ಈ ಅಭಿಪ್ರಾಯದಂತೆ ನಿಮ್ಮ ವರ್ತನೆಯು ಸರಿಯೆ? ಎಂಬ ಸಂಶಯವು ಬರುವದು ಸಹಜವಾಗಿದೆ. ನೀವು ಒಮ್ಮೆ ಸಂಶಯಕ್ಕೆ ವಶರಾದಮೇಲೆ ನಿಶ್ಚಯಜ್ಞಾನರೂಪವಾದ ನಿಷ್ಠೆಯು ಇನ್ನೂ ನಿಮಗೆ ದಕ್ಕಿಲ್ಲವೆಂದೇ ಸಿದ್ಧವಾಗುತ್ತದೆ. ನಿಮ್ಮ ಮನಸ್ಸಿಗೇ ನೀವು ಮಾಡುವದು ಸರಿಯೊ? ತಪ್ಪೋ? ಎಂದು ಪ್ರಶ್ನಿಸಿಕೊಳ್ಳಿರಿ. ಮತ್ತು ನೀವು ಶುಚಿಯಾಗಿದ್ದಾಗ ಧರ್ಮಗ್ರಂಥಗಳನ್ನು ಓದುವ ಸಮಯದಲ್ಲಿ ಉಂಟಾಗುವ ಮನಸ್ಸಿನಭಾವನೆಗಳಿಗೂ ಅಶುಚಿಯಾಗಿದ್ದಾಗ ಓದುವ ಸಂದರ್ಭದಲ್ಲಿ ಉಂಟಾಗುವ ಮಾನಸಿಕಭಾವನೆಗಳಿಗೂ ತಾಳೆಹಾಕಿಕೊಳ್ಳಿರಿ. ಸರಿ–ಎಂದೇ ಕಂಡುಬಂದರೆ ಯಾರನ್ನೂ ಕೇಳದೆ ಮುಂದುವರೆಸಿರಿ. ತಪ್ಪು ಎಂದು ಕಂಡುಬಂದರೆ ನೀವೇ ತಿದ್ದಿಕೊಂಡು ಬಿಡಿರಿ. ನಿಮ್ಮ ಆತ್ಮನೇ ನಿಮಗೆ ಗುರುವು.

ನನ್ನ ಅಭಿಪ್ರಾಯವು ಹೀಗಿದೆ: ವೇದ- ಧರ್ಮಶಾಸ್ತ್ರ– ಸ್ಮೃತಿಗಳನ್ನು ರಚಿಸಿರುವ ಋಷಿಮುನಿಗಳು ಬಹಳ ತಪಸ್ವಿಗಳೂ ಮಹಾನುಭಾವರೂ ಕರುಣಾಪೂರ್ಣರೂ ಅಕಾಮಹತರಾದ ವಿದ್ವಾಂಸರೂ ಶ್ರೋತ್ರಿಯರೂ ಆಗಿದ್ದವರು. ಇಂಥವರ ನುಡಿಗಳಲ್ಲಿ ಒಂದಕ್ಷರವನ್ನು ಕೂಡ ತಿದ್ದುವ ಹಾಗೂ ಬದಲಾಯಿಸುವ ಅಧಿಕಾರವು ನಮಗೆ ಯಾರಿಗೂ ಇರುವದಿಲ್ಲ. ಆದರೆ ಧರ್ಮದ ಹೆಸರಿನಲ್ಲಿ ಸಾಧಕನಿಗೆ ಆಚರಿಸಲು ತೀರ ಕಷ್ಟವಾದ ಹಾಗೂ ಮೂಢನಂಬಿಕೆಗಳಿಂದ ಬೆಳೆದುಬಂದಿರಬಹುದಾದ ಕೆಲವು ಆಚಾರಗಳನ್ನು ಈಗಿನ ಕಾಲದೇಶಗಳಿಗೆ ಅನುಗುಣವಾಗಿ ಬದ

ಲಾಯಿಸಿ ಹೊಂದಿಸಿಕೊಳ್ಳಬಹುದು. ಉದಾಹರಣೆಗೆ : ಹಿತ್ತಾಳೆ, ತಾಮ್ರದ ಪಾತ್ರೆಗಳಿಗೆ ಹುಣಿಸೆಹಣ್ಣನ್ನು ಸವರಿ ತೊಳೆದು ಶುದ್ಧಮಾಡುತ್ತಿದ್ದಂತೆ– ಈಗಿನ ಪ್ಲಾಸ್ಟಿಕ್ ಪಾತ್ರೆಗಳಿಗೆ ಮಾಡಬೇಕಾಗಿಲ್ಲ. ಹಾಗೆಯೇ ಸಗಣಿಯಿಂದ ಒಲೆ ಸಾರಿಸುತ್ತಿದ್ದಂತೆ ಈಗಿನ ಸ್ಟೌವ್ ಹಾಗೂ ವಿದ್ಯುಚ್ಛಕ್ತಿಯ ಒಲೆಗಳನ್ನು ಸಗಣಿಯನ್ನು ಸವರಿ ತೊಳೆಯಬೇಕಾಗಿಲ್ಲ. ಇಂಥ ಹೊಂದಾಣಿಕೆಗಳಿಗೆ ಶಾಸ್ತ್ರದಲ್ಲಿ ಅವಕಾಶವುಂಟು. ನೀವು ಬಹಿಷ್ಠೆಯಾದಾಗ ಕೇಳಬಾರದೆಂದು ಸಂಶಯಪಟ್ಟು ಕೊಂಡಿರುವ ದೇವರ ಸ್ತೋತ್ರಗಳನ್ನು ಎಲ್ಲರಿಗೂ ಕೇಳುವಂತೆ ಮೈಕ್‌ನಲ್ಲಿ ಪ್ರಸಾರ ಮಾಡುವಂಥ ಈಗಿನ ಕಾಲದಲ್ಲಿ ನೀವೇನು ಮಾಡಲು ಸಾಧ್ಯ? ಕಿವಿಯನ್ನು ಮುಚ್ಚಿಕೊಂಡರೂ ನಡೆಯುವದಿಲ್ಲವಷ್ಟೆ? ಇದರಿಂದ ಪಾಪವೆ? ಪುಣ್ಯವೆ? ಮೈಕು ಹಾಕಿದವರಿಗಾಗಲಿ, ಕೇಳಿದವರಿಗಾಗಲಿ, ಯಾರಿಗೆ ಈ ಕರ್ಮಫಲಗಳನ್ನು ಅಂಟಿಸಬೇಕು? ಆದ್ದರಿಂದ ಶಿಷ್ಟಾಚಾರಗಳೂ ವರ್ಣಾಶ್ರಮಧರ್ಮಗಳೂ ಬಹಳಮಟ್ಟಿಗೆ ಲೋಪವಾಗಿಬಿಟ್ಟಿರುವ ಈ ಕಾಲದಲ್ಲಿ ನೀವು ಸಲ್ಲದ ಸಂಶಯಗಳನ್ನು ಮುಂದುಮಾಡಿಕೊಂಡು ಸನ್ಮಾರ್ಗದಲ್ಲಿ ಮುಂದುವರೆಯುವದನ್ನು ಬಿಡಬಾರದು.

ನೀವು ಈಗ ಧರ್ಮಶಾಸ್ತ್ರಕ್ಕೂ ಮೋಕ್ಷಶಾಸ್ತ್ರಕ್ಕೂ ಸಮನ್ವಯಮಾಡಿಕೊಂಡು ನಡೆಯಬಹುದಾಗಿದೆ. ಹೇಗೆಂದರೆ: ಧರ್ಮಗ್ರಂಥಗಳ ಮೂಲಭಾಗಗಳನ್ನು ಹಾಗೆ ಹಾಗೆಯೇ ಓದುವದಕ್ಕೆ ನೀವು ಶುಚಿಯಾಗಿರುವ ವೇಳೆಯಲ್ಲಿಯೇ ಅವಕಾಶ ಮಾಡಿಕೊಳ್ಳಿರಿ. ಅನುವಾದವನ್ನೋ ತಾತ್ಪರ್ಯಸಂಗ್ರಹವನ್ನೋ ಓದುವದನ್ನು ಉಳಿದ ಸಮಯಕ್ಕೆ ಮೀಸಲಾಗಿರಿಸಿರಿ. ಆಗ್ಗೆ ಗಟ್ಟಿಯಾಗಿ ಓದದೆ ಮನಸ್ಸಿನಲ್ಲೇ ಓದಿಕೊಳ್ಳಿರಿ. ಮತ್ತು ಯಾವದೇ ಭಗವನ್ನಾಮವನ್ನೂ ಸ್ಮರಿಸಿಕೊಳ್ಳಲು ಅಡ್ಡಿಯಿಲ್ಲ. ಆದರೆ ಜಪಸರವನ್ನು ಉಪಯೋಗಿಸಿ ಪುರಶ್ಚರಣೆಮಾಡುವದಾಗಲೀ ಸಂಖ್ಯಾಬದ್ಧವಾಗಿ ಮಾಡುವದನ್ನಾಗಲೀ ಆಚರಿಸಬೇಡಿರಿ. ಶುಚಿಯಾಗಿದ್ದಾಗ ನೀವು ಕೈಗೊಳ್ಳುವ ಯಾವದೇ ನಿತ್ಯಾನುಷ್ಠಾನವನ್ನೂ ಅಶುಚಿಕಾಲದಲ್ಲಿ ಮುಂದುವರಿಸಬೇಡಿರಿ. ಧರ್ಮಗ್ರಂಥಗಳಲ್ಲಿ ನಿಮಗೆ ರುಚಿಸಬಹುದಾದ ವಿಷಯಗಳು ಓದುವ ಸಮಯಕ್ಕೆ ಹೊಳೆದರೆ ಅಂಥವುಗಳನ್ನು ಮತ್ತೆ ಮತ್ತೆ ಮನನಮಾಡಬಹುದು. ಇದಕ್ಕೇನೂ ಅಡ್ಡಿಯಿಲ್ಲ. ಬಹಳಮಟ್ಟಿಗೆ ಶಾಸ್ತ್ರಗಳಲ್ಲಿ ಸ್ತ್ರೀಯರಿಗೆ ಅಶುಚಿಸಮಯವನ್ನು ವಿಶ್ರಾಂತಿಗೆಂದೇ ಗೊತ್ತುಮಾಡಲಾಗಿದೆ. ನಿಮ್ಮ ಸನ್ನಿವೇಶದಲ್ಲಿ ಅದು ಅಸಾಧ್ಯವಾಗಿರುವದರಿಂದ ಉತ್ತಮ ಅಧ್ಯಾತ್ಮಗ್ರಂಥಗಳ ಪಠನೆಯು ಕಟ್ಟುಕಥೆ, ಪತ್ತೇದಾರಿ ಕಾದಂಬರಿಗಳನ್ನು ಓದಿ ಮನಸ್ಸನ್ನು ಕಲುಷಿತಗೊಳಿಸಿಕೊಳ್ಳುವದಕ್ಕಿಂತ ಉತ್ತಮವೇ ಸರಿ. ಒಟ್ಟಿನಲ್ಲಿ ಕೇವಲ ಮೂರುದಿನಗಳ ನಷ್ಟವನ್ನು ಉಳಿದ ಇಪ್ಪತ್ತೇಳು ದಿನಗಳಲ್ಲಿ ಮನಸ್ಸುಮಾಡಿದರೆ ನೀವು ಭರ್ತಿಹಾಕಿಕೊಳ್ಳಬಹುದು. ನಿಮ್ಮ ಇಷ್ಟಕ್ಕೇ ಇದನ್ನು ಬಿಡಲಾಗಿದೆ.

---

# ಈ ಗ್ರಂಥವು ನಿಮಗೆ ಬೇಕೆ?

ಶ್ರೀ ಶಂಕರಾಚಾರ್ಯರ ಮೇರುಕೃತಿಯೆನಿಸಿರುವ **ಬ್ರಹ್ಮಸೂತ್ರಭಾಷ್ಯ**ವನ್ನು ಕನ್ನಡ ಅನುವಾದದೊಡನೆ ಕಾರ್ಯಾಲಯದವರು ಈಚೆಗೆ ಪ್ರಕಟಿಸಿರುತ್ತಾರೆ. ಇದು ಹಿಂದೆ 1952ನೆಯ ವರ್ಷದಲ್ಲಿ ಮುದ್ರಣವಾಗಿತ್ತು. ಪ್ರತಿಗಳೆಲ್ಲವೂ ಮುಗಿದು ಹೋಗಿ ಹತ್ತು ವರ್ಷಗಳಾಗಿದ್ದವು. ಈಗ ಮತ್ತೊಮ್ಮೆ ಮುದ್ರಿಸಿ ಹೊರತರಲಾಗಿದೆ.

ಈ ಗ್ರಂಥದಲ್ಲಿ ಬಾದರಾಯಣಾಚಾರ್ಯರು ರಚಿಸಿರುವ ೫೫೫ ವೇದಾಂತ ಸೂತ್ರಗಳನ್ನು ಶಂಕರಭಾಷ್ಯಸಮೇತ ಕೊಡಲಾಗಿದೆ. ಈ ವೇದಾಂತಸೂತ್ರಗಳನ್ನು ಸಮನ್ವಯ, ವಿರೋಧಪರಿಹಾರ, ಸಾಧನ, ಫಲ– ಎಂಬೀ ರೀತಿಯಾಗಿ ನಾಲ್ಕು ವಿಭಾಗಮಾಡಲಾಗಿದೆ. ಅದಕ್ಕನುಗುಣವಾಗಿಯೇ ಶಂಕರಭಾಷ್ಯವೂ ರಚಿಸಲ್ಪಟ್ಟಿದೆ. ಈ ಗ್ರಂಥವನ್ನು ಜಿಜ್ಞಾಸುಗಳು ಅಧ್ಯಯನಮಾಡುವದರಿಂದ ವೇದಾಂತದರ್ಶನದ ಸಾರವೆಲ್ಲವೂ ಆಳವಟ್ಟಂತೆ ಆಗಿ ಔಪನಿಷದಪುರುಷನ ಜ್ಞಾನವು ಲಭಿಸಿ ಮೋಕ್ಷ ಪ್ರಾಪ್ತಿಯು ಸುಲಭವಾಗಲಿದೆ. ಆದರೆ ಇದೊಂದು ಶಾಸ್ತ್ರೀಯವಾದ ಉದ್ಗ್ರಂಥ ವಾಗಿರುವದರಿಂದ ವೇದಾಂತಶಾಸ್ತ್ರದಲ್ಲಿ ಪ್ರವೇಶವೇ ಇಲ್ಲದವರಿಗೂ ಅಲ್ಪಸ್ವಲ್ಪ ಪರಿಚಯವಿರುವವರಿಗೂ ಸದ್ಯಕ್ಕೆ ಉಪಯೋಗವಾಗುವಂತಿಲ್ಲವೆಂಬುದು ನಿಜ. ಆದರೂ ಕನ್ನಡ ಅನುವಾದ, ಟಿಪ್ಪಣಿಗಳು, ಪೀಠಿಕೆ-ಶಬ್ದಾನುಕ್ರಮಣಿಕೆ-ಮುಂತಾದ ಸೌಕರ್ಯವಿಶೇಷಗಳಿರುವದರಿಂದ ಪ್ರಯತ್ನಮಾಡಿದಲ್ಲಿ ಅರ್ಥಮಾಡಿಕೊಳ್ಳಬಹುದಾಗಿದೆ. ಶಾಸ್ತ್ರೀಯಗ್ರಂಥಗಳನ್ನು ಎಷ್ಟೇ ಸರಳಗೊಳಿಸಿದರೂ ಅವುಗಳ ಘನತೆ ಗೌರವಗಳನ್ನಂತೂ ಕಡಿಮೆಮಾಡಲಾಗುವದಿಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ.

ಜಿಜ್ಞಾಸುಗಳು ಈ ಗ್ರಂಥವನ್ನು ಸುಮ್ಮನೆ ಓದಿದರೆ ಸಾಲದು. ಇದರ ಅಧ್ಯಯನಕ್ಕೆ ಅಗತ್ಯವಾದ ಉಪನಿಷದ್‌ಭಾಷ್ಯಗಳನ್ನೂ ಓದಿರಬೇಕಾದದ್ದು ಅವಶ್ಯಕ. ದರ್ಶನಾಂತರಗಳ ಪರಿಚಯವೂ ಸಂಸ್ಕೃತಭಾಷಾಜ್ಞಾನವೂ ಇದ್ದರಂತೂ ಬಹಳ ಅನುಕೂಲ. ವಾಚಕರು ತಮ್ಮತಮ್ಮ ಅರ್ಹತೆಗಳನ್ನು ಗೊತ್ತುಮಾಡಿಕೊಂಡೇ ಈ ಗ್ರಂಥದ ಅಧ್ಯಯನಕ್ಕೆ ಸಜ್ಜಾಗಬೇಕಾಗಿ ಕೋರುತ್ತೇವೆ.

ಕನ್ನಡಿಗರ ಸುದೈವದಿಂದಲೇ ಈ ಗ್ರಂಥವು ಎರಡು ಸಂಪುಟಗಳಾಗಿ ಈಗ ಹೊರಬಂದಿದೆ. ಬೇರೆ ಯಾವ ಭಾಷೆಯಲ್ಲಿಯೂ ಶಂಕರಭಾಷ್ಯಸಮೇತವಾದ ಬ್ರಹ್ಮಸೂತ್ರಗಳು ಇಷ್ಟೊಂದು ಸೌಕರ್ಯವಿಶಿಷ್ಟವಾಗಿ ಖಂಡಿತ ಪ್ರಕಟವಾಗಿರುವದಿಲ್ಲ. ಶ್ರೀಶ್ರೀಗಳವರು ಇದರಲ್ಲಿ ಅಳವಡಿಸಿರುವ ಟಿಪ್ಪಣಿಗಳು ಗ್ರಂಥಗ್ರಂಥಿಗಳನ್ನೆಲ್ಲ ಬಿಚ್ಚಿ ಸಿದ್ಧಾಂತವನ್ನು ಅಂಗೈನೆಲ್ಲಿಕಾಯಿಯಂತೆ ಪ್ರಕಾಶಗೊಳಿಸುವವು. ಒಮ್ಮೆ ಈ ಗ್ರಂಥವನ್ನು ಓದಿ ಕೃತಾರ್ಥರಾಗಿರಿ.

**ಗ್ರಂಥದ ಈಗಿನ ಬೆಲೆ ರೂ. ೧೫೦-೦೦.** ಅಂಚೆವೆಚ್ಚ ರೂ. ೧೫.

———

# ಸಾವಿನ ಅಂಜಿಕೆಯಿಂದ ಕಲಿಯಬೇಕಾದದ್ದು

(ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

ಸಾವಿನ ಅಂಜಿಕೆಯು ಸಾಮಾನ್ಯವಾಗಿ ಎಲ್ಲರಿಗೂ ಇದ್ದುಕೊಂಡಿದೆ. ಇದು ಇಲ್ಲದವರು ತೀರ ವಿರಳರಾಗಿರುತ್ತಾರೆ. ಹಸಿವು, ಬಾಯಾರಿಕೆ, ಉಸಿರುಕಟ್ಟುವದೇ- ಮುಂತಾದ ಯಾವದೊಂದು ಬಂದೊದಗಿದರೂ ಸಾವು ಕೂಡಲೆ ಆ ಸಂಕಟವನ್ನು ಪರಿಹಾರಮಾಡಿಕೊಳ್ಳುವದಕ್ಕೆ ಪ್ರಯತ್ನಿಸುವೆವು. ಹಸಿವು, ನೀರಡಿಕೆ, ಹಾಗೊ ಅಪಘಾತಾದಿಗಳ ನಿಮಿತ್ತದಿಂದ ಸಂಭವಿಸುವ ಉಸಿರುಕಟ್ಟುವಿಕೆ, ರಕ್ತಸ್ರಾವ- ಮುಂತಾದವುಗಳನ್ನು ಸಾವಿನ ದೂತರು- ಎನ್ನಬಹುದು. ರೋಗಗಳು, ಮುಪ್ಪು- ಇವುಗಳೂ ಸಾವಿನ ದೂತರೇ ಆಗಿರುವರು. ರೋಗವುಂಟಾದರೆ ಕೂಡಲೆ ನರಳುವೆವು. ಯಾವದಾದರೊಂದು ಪರಿಹಾರವನ್ನು ಹುಡುಕುವೆವು. ಮುಪ್ಪು ಬಂದರಂತೂ ಶರೀರದ ಅವಯವಗಳೆಲ್ಲವೂ ಸಡಿಲವಾಗುವವು. ಇಂದ್ರಿಯಗಳು ಬಲಕುಂದುವವು. ನಮಗೆ ಇನ್ನೆಷ್ಟು ದಿನಗಳ ಆಯುಸ್ಸು ಉಳಿದಿದೆಯೊ ? ಎಂಬ ಚಿಂತೆಯು ಹತ್ತುವದು. ಹೀಗೆ ಅವಿವೇಕಿಗಳಿಗೆ ಸಾವಿನ ಚಿಂತೆಯು ತಪ್ಪಿದ್ದಲ್ಲ.

ಆದರೆ ಇಲ್ಲೊಂದು ವಿಚಾರದ ವಿಷಯವಿದೆ. ದೇಹ, ಪ್ರಾಣ, ಇಂದ್ರಿಯ, ಮನಸ್ಸು- ಇವುಗಳಿಗೆ ಬೆಳೆಯುವದು, ಕುಗ್ಗುವದು, ಸೊರಗುವದು- ಮುಂತಾದ ವಿಕಾರಗಳಾಗುವದು ನಮಗೇ ಗೋಚರವಾಗುತ್ತದೆ. ಇವೆಲ್ಲವನ್ನೂ ನೋಡುತ್ತಿರುವ ನನ್ನ ಸ್ವರೂಪವು ಯಾವದು? ಅದಕ್ಕೆ ಸಾವು ಇದ್ದೀತೆ? ಅದರ ನಿಜವೇನು? ಎಂದು ವಿಚಾರಿಸಿಕೊಳ್ಳುವವರು ಅಧ್ಯಾತ್ಮವಿದ್ಯಾರಸಿಕರು. ಅವರು ಶರೀರಾದಿಗಳಿಗಿಂತಲೂ ವಿಲಕ್ಷಣವಾದ ಬೇರೊಂದು ತತ್ತ್ವವಿದೆ- ಎಂಬುದನ್ನು ತಿಳಿದುಕೊಂಡಿರುತ್ತಾರೆ. ಅದನ್ನು ಶಾಸ್ತ್ರದಲ್ಲಿ ಆತ್ಮನೆಂದು ಕರೆದಿರುತ್ತಾರೆ. ಅಧ್ಯಾತ್ಮಗ್ರಂಥಗಳೆಲ್ಲವೂ ಒಕ್ಕೊರಲಿನಿಂದ ಆತ್ಮನಿಗೆ ಸಾವಿಲ್ಲವೆಂದೇ ಘೋಷಿಸುತ್ತಿವೆ. ಅವುಗಳ ಅಭಿಪ್ರಾಯದಂತೆ ಸಕಲಪ್ರಾಣಿಗಳ ಅಂತರಾತ್ಮವೂ ಜಗಜ್ಜನ್ಮಾದಿಕಾರಣವೂ ಆದ ತತ್ತ್ವವೇ ಅಜವೂ ಅಜರವೂ ಅಮೃತವೂ ಅಭಯವೂ ಆಗಿದ್ದು ಬ್ರಹ್ಮವೆಂದೂ ಹೆಸರಿಸಲ್ಪಟ್ಟಿರುತ್ತದೆ. ಆತ್ಮನೇ ಬ್ರಹ್ಮವು ; ಬ್ರಹ್ಮವೇ ಆತ್ಮನು- ಎಂಬ ಸಮ್ಯಗ್ಜ್ಞಾನವೊಂದೇ ನಮ್ಮನ್ನು ಸಾವಿನ ಅಂಜಿಕೆಯಿಂದ ಪಾರುಮಾಡಬಲ್ಲದೆಂದೂ ಅವುಗಳ ಹೇಳಿಕೆಯಿದೆ. ನಾವು ನಿಜವಾಗಿಯೂ ಸಾವನ್ನು ಮೀರುವ ಆಸಕ್ತಿಯುಳ್ಳವರಾಗಿದ್ದರೆ ಈ ಬ್ರಹ್ಮಾತ್ಮಜ್ಞಾನದ ಸಂಪಾದನೆಗೆ ಸಿದ್ಧರಾಗಬೇಕು. ಜೀವನದ ಬೆಲೆಯನ್ನು ವಯಸ್ಸಿನಿಂದ ಅಳೆಯಬಾರದು. ಈ ವಯಸ್ಸಿನಲ್ಲಿ ನಾವು ಸಂಪಾದಿಸಿಕೊಂಡಿರುವ ಜ್ಞಾನ, ಆಚರಣೆಗೆ ತಂದುಕೊಂಡ ಭೂತದಯೆ, ಸಂಪಾದಿಸಿಕೊಂಡ ಈಶ್ವರಭಕ್ತಿ- ಇವಕ್ಕೇ ಹೆಚ್ಚಿನ ಬೆಲೆ ಎಂದು ಬಲ್ಲವರು ಹೇಳುತ್ತಾರೆ.

---

# ಉಪಕಾರಸ್ಮರಣೆ

**ಪತ್ರಿಕೆಗೆ ನೂತನ ಮಹಾಪೋಷಕರುಗಳು :** ಶ್ರೀಯುತರುಗಳಾದ : MPN. 705 ಎಂ. ವಿಶ್ವೇಶ್ವರ-ರವರು, ಹಾಸನ; 706 ಮೆಸರ್ಸ್ ಜಿ. ಕೆ. ನರಸಿಂಹಯ್ಯ ಅಂಡ್ ಸನ್ಸ್‌ರವರು, ಬೆಂಗಳೂರು; 707 ಎನ್. ಎಸ್. ನಾರಾಯಣರಾಯರು, ಬೆಂಗಳೂರು; 708 ಶ್ರೀಮತಿ ಆರ್. ವಿಜಯಾ-ರಾಜೀವ್‌ರವರು, ಬೆಂಗಳೂರು- ಈ ಮಹನೀಯರುಗಳು ರೂ. ೧೫೧ ರಂತೆ ಮಹಾಪೋಷಣದ್ರವ್ಯವನ್ನು ನೀಡಿ ಪ್ರೋತ್ಸಾಹಿಸಿದ್ದಾರೆ.

1983 ನೆಯ ಮಾರ್ಚಿ ಮತ್ತು ಏಪ್ರಿಲ್ ಮಾಹೆಗಳಲ್ಲಿ ಈ ಕೆಳಗೆ ಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :-

**ಗ್ರಂಥಪ್ರಕಟನೆಗೆ :** ಶ್ರೀಗಳಾದ ಜೆ. ವಿ. ಪೂರ್ಣಚಂದ್ರರಾವ್, ಗುಂಟೂರು, ರೂ. ೨೫೦; ಬಿ. ಮಾರಪ್ಪನವರು, ಬೆಂಗಳೂರು, ರೂ. ೨೫೦; ಕೋಲಾರದ ಭಕ್ತಮಹಾಜನರು, ರೂ. ೧೧೧; ಡಾಕ್ಟರ್ ವಿ. ಎಸ್. ಕೃಷ್ಣಮೂರ್ತಿಯವರು, ಕೋಲಾರ, ರೂ. ೨೫; ಒಟ್ಟು ರೂ. ೬೩೬.

**ಪೂಜಾಮಂದಿರಕ್ಕೆ :** ಶ್ರೀ ಹೆಚ್. ವಿ. ರಾಮಚಂದ್ರರವರು, ಬೆಂಗಳೂರು, ರೂ. ೧೦೧; ಯಾದಾಳಂ ವಂಶೀಕರು, ರೂ. ೩೦; ಎಂ. ಹನುಮಂತರಾಯರು, ಆದವಾನಿ, ರೂ. ೨೦; ಆರ್. ಭೋಜರಾಜ, ಬೆಂಗಳೂರು, ರೂ. ೧೦; ಭಕ್ತರುಗಳಿಂದ ರೂ. ೮; ಒಟ್ಟು ರೂ. ೧೬೯.

**ಗುರುಮಂದಿರಕ್ಕೆ :** ಯಾದಾಳಂ ವಂಶೀಕರು, ಬೆಂಗಳೂರು, ರೂ. ೨೦:

**ಅತಿಥಿಸತ್ಕಾರನಿಧಿಗೆ :** ಶ್ರೀಗಳಾದ ಜಿ. ರಾಮಯ್ಯನವರು, ಮೈಸೂರು, ರೂ. ೧೦; ಆರ್. ಭೋಜರಾಜ-ಬೆಂಗಳೂರು, ರೂ. ೧೦; ಒಟ್ಟು ರೂ. ೨೦.

**ಸಂನ್ಯಾಸಿಗಳ ಸತ್ಕಾರನಿಧಿಗೆ :** ಶ್ರೀಮತಿಯರಾದ ಕೆ. ವಿ. ಲಲಿತಾಂಬರವರು, ಹೊಳಲ್ಕೆರೆ, ರೂ. ೩೦; ಗೌರಮ್ಮ, ಹೊ.ನ ಪುರ, ರೂ. ೫; ಒಟ್ಟು ರೂ ೩೫.

**ಅನುಷ್ಠಾನಗಳ ನಿಧಿಗೆ :** ಶ್ರೀಗಳಾದ ದತ್ತಪ್ಪ ವಿಠೋಬಾರವರು, ಬೆಂಗಳೂರು, ರೂ. ೧೦; ಕೆ. ಜಿ. ಸುಬ್ರಾಯಶರ್ಮ, ಬೆಂಗಳೂರು, ರೂ. ೫; ಹೆಚ್. ವಿ. ರಾಮಚಂದ್ರರವರು, ಬೆಂಗಳೂರು, ರೂ. ೧೦೧; ಸಿ. ಹಿರಣ್ಯಪ್ಪನವರು, ರೂ. ೫; ರಾಮಚಂದ್ರಗಣಪಯ್ಯಹೆಗಡೆ, ಹೊನ್ನಗದ್ದೆ, ರೂ. ೫; ಎಸ್. ವಿ. ಕುಲಕರ್ಣಿ, ಇಂಗಳೇಶ್ವರ, ರೂ. ೫; ರಾಮಾದೀಕ್ಷಿತ, ಅಡೂರ, ರೂ. ೧೦; ಕುಸುಮಾರವರು, ಬೆಂಗಳೂರು, ರೂ. ೫೧; ಜಿ. ವಿ. ನಾಗರತ್ನಮ್ಮನವರು, ತಿಪಟೂರು, ರೂ. ೧೦೧; ಭಾಗೀರಥಮ್ಮ, ರೂ. ೫; ತುಳಸೀಬಾಯಿಯವರು, ಎಮ್ಮಿಗನೂರು, ರೂ. ೧೫; ಆರ್. ಭೋಜರಾಜ, ಬೆಂಗಳೂರು, ರೂ. ೧೫; ಎ. ತಾಂಡವೇಶ್ವರ, ರೂ. ೧೦; ಸಂಪಂಗಿರಾಮಯ್ಯನವರು, ಬೆಂಗಳೂರು, ರೂ. ೨೦; ಡಿ. ಹೆಚ್. ಪುಂಡಲೀಕರಾಯರು, ರೂ. ೫೦; ನೀಲವಾಣಿಯವರು, ಕಟಗೇರಿ ರೂ. ೧೦; ಒಟ್ಟು ರೂ ೪೧೮;

ಮೇಲ್ಕಂಡ ಮಹಾಶಯರುಗಳಿಗೆಲ್ಲ ನಮ್ಮ ಅಭಿನಂದನೆಗಳು.

---

# ಮಹಾಜನರಲ್ಲಿ ಬಿನ್ನಹ

(ಕಾರ್ಯದರ್ಶಿ)

ನಮ್ಮ ಭರತಖಂಡದಲ್ಲಿ ಉದಾರವಾಗಿ ದಾನಮಾಡುವಂಥ ಮಹಾಶಯರುಗಳಿಗೇನೂ ಕಡಿಮೆಯಿಲ್ಲ. ದೇವತಾಕಾರ್ಯಗಳು, ಧಾರ್ಮಿಕ ಉತ್ಸವಾನುಷ್ಠಾನಗಳು, ದೇವಾಲಯ-ಛತ್ರಗಳ ನಿರ್ಮಾಣ, ಶಿಶುವಿಹಾರ, ಆಸ್ಪತ್ರೆಗಳ ಸ್ಥಾಪನೆ- ಇತ್ಯಾದಿ ಸಾರ್ವಜನಿಕರಿಗೆ ಉಪಯುಕ್ತವಾದ ಕಾರ್ಯಗಳಿಗೆ ಧಾರಾಳವಾಗಿ ದಾನಮಾಡುವವರಿದ್ದಾರೆ. ಕೆಲವು ಮಹನೀಯರು ದೇವರ ಹೆಸರಿನಲ್ಲಿ ಪುದುವಟ್ಟುಗಳನ್ನೂ ಸ್ಥಾಪಿಸಿ ನಿತ್ಯೋತ್ಸವ, ಮಾಸೋತ್ಸವ, ವಾರ್ಷಿಕೋತ್ಸವಗಳನ್ನೂ ಏರ್ಪಾಡುಮಾಡುತ್ತಾರೆ. ದೇವರುಗಳಿಗೆ ಕಾಣಿಕೆ, ಆಭರಣವಸ್ತ್ರಾದಿಗಳನ್ನೂ ಸಮರ್ಪಿಸುತ್ತಾರೆ. ತೀರ್ಥಯಾತ್ರೆಗಳಿಗೂ ದಾನಧರ್ಮಗಳಿಗೂ ತಮ್ಮ ಹಣವನ್ನು ವಿನಿಯೋಗಿಸುತ್ತಾರೆ. ಬಡಬಗ್ಗರಿಗೆ ಸೀರೆವಸ್ತ್ರಗಳನ್ನು ಹಂಚುವದು, ಸಾಮೂಹಿಕ ವಿವಾಹೋಪನಯನಗಳನ್ನು ಏರ್ಪಡಿಸುವದು, ಇತ್ಯಾದಿ ಸತ್ಕಾರ್ಯಗಳಂತೂ ನಿರಂತರವಾಗಿ ನಡೆಯುತ್ತಲೇ ಇವೆ. ಇವೆಲ್ಲವೂ ಶ್ಲಾಘ್ಯವಾದ ಕಾರ್ಯಗಳೆಂಬುದರಲ್ಲಿ ಸಂಶಯವಿಲ್ಲ.

ಮೇಲ್ಕಂಡ ಕಾರ್ಯಗಳಿಗೆ ಹೋಲಿಸಿದರೆ ನಮ್ಮ ದೇಶದಲ್ಲಿ ಜನರನ್ನು ವಿದ್ಯಾವಂತರನ್ನಾಗಿಯೂ ಜ್ಞಾನಿಗಳನ್ನಾಗಿಯೂ ಮಾಡುವದಕ್ಕೆ ತಕ್ಕ ಏರ್ಪಾಡುಗಳನ್ನೂ ದಾನಧರ್ಮಗಳನ್ನೂ ಮಾಡುವವರು ತೀರ ಕಡಿಮೆ. ಈಚೆಗೆ ಕೆಲವು ಮಠಾಧಿಪತಿಗಳು ವಿದ್ಯಾಪ್ರಸಾರಕಾರ್ಯವನ್ನು ಕೈಗೊಂಡು ದಾನಿಗಳನ್ನು ಪ್ರೋತ್ಸಾಹಿಸುತ್ತಿದ್ದಾರಾದರೂ ಲೌಕಿಕವಿದ್ಯಾಭ್ಯಾಸಕ್ಕೂ ಹೊಟ್ಟೆಯಪಾಡಿನ ತಿಳಿವಳಿಕೆಗೂ ಜನರನ್ನು ಸಿದ್ಧಗೊಳಿಸುವಂಥ ಪ್ರಯತ್ನಗಳಿಗೇ ದಾನದ ಹಣದ ಸಿಂಹಪಾಲು ವಿನಿಯೋಗವಾಗುತ್ತಿದೆ.

ಆದರೆ ಭರತಖಂಡದ ಸಂಸ್ಕೃತಿಯ ಜೀವಾಳವೂ ಭಾರತೀಯರಿಗೆ ವಿದೇಶಗಳಲ್ಲಿಯೂ ಗೌರವಕೀರ್ತಿಗಳನ್ನು ತಂದುಕೊಟ್ಟು ಮಾನವವರ್ಗವನ್ನೇ ಕಾಮಕ್ರೋಧಗಳ ಹಿಡಿತದಿಂದ ಬಿಡಿಸಿ ಅಮೃತರನ್ನಾಗಿಯೂ ಶಾಶ್ವತಸುಖಿಗಳನ್ನಾಗಿಯೂ ಮಾಡುವಂಥ ಅಧ್ಯಾತ್ಮವಿದ್ಯೆಯ ಪ್ರಚಾರಕ್ಕೆ ಕೊಡುಗೈಯಿನ ದಾನಮಾಡುವಂಥ ಕರ್ಣಪುತ್ರರು ಇನ್ನೂ ವಿರಳಸಂಖ್ಯೆಯಲ್ಲಿದ್ದಾರೆ. ಅದರಲ್ಲಿಯೂ ಅಧ್ಯಾತ್ಮಗ್ರಂಥಗಳ ಪ್ರಕಟನೆ, ಪ್ರಚಾರಗಳ ವಿಷಯಕ್ಕೆ ಬೇಡಿಕೊಂಡರೂ ಭಿಕ್ಷೆಹಾಕುವವರು ಸಿಗುವದು ದುರ್ಲಭವಾಗಿದೆ. ಸರಕಾರದವರಂತೂ ಇಂಥ ಪ್ರಯತ್ನಗಳನ್ನೇ ಕೈಬಿಟ್ಟಿರುತ್ತಾರೆ. ಪ್ರಕೃತ ಅಧ್ಯಾತ್ಮಪ್ರಕಾಶಕಾರ್ಯಾಲಯದಲ್ಲಿ ಪುನರ್ಮುದ್ರಣಕ್ಕೆ ಕಾದು ಕುಳಿತಿರುವ ಹತ್ತಾರುಗ್ರಂಥಗಳ ಪ್ರಕಟನೆಗೆ ಒಂದು ವರ್ಷಕ್ಕೆ ಒಂದು ಲಕ್ಷ ರೂಪಾಯಿಗಳ ಅಗತ್ಯವಿದೆ. ಯಾರಾದರೂ ದಾನಿಗಳು ಈ ಕೊರತೆಯನ್ನು ನೀಗಿ ತಮ್ಮ ದಾನಧರ್ಮಗಳ ಕಾಲುವೆಯನ್ನು ಈ ಸಂಸ್ಥೆಯಕಡೆಗೂ ಹರಿಯಿಸಿ ಜನರ ಶಾಶ್ವತಸುಖಲಾಭಗಳಿಗೆ ಸಹಾಯಕರಾಗಬಹುದಲ್ಲವೆ ?

---

ವಿಮುಕ್ತಃ ಸರ್ವಪಾಪೇಭ್ಯೋ ವಿಷ್ಣುಲೋಕಂ ಪ್ರಯಾಸ್ಯಸಿ ।
ನೋ ಚೇದ್ ಗಮಿಷ್ಯಸೇಽಧೋಽಧಃ ಪುನರಾವೃತ್ತಿವರ್ಜಿತಃ ॥೫೩॥
ಅಂಗೀಕುರುಷ್ವ ಮದ್ವಾಕ್ಯಂ ಹಿತಮೇವ ವದಾಮಿ ತೇ ।
ಸತ್ಸಂಗತಿಂ ಕುರು ಭಜಸ್ವ ಹರಿಂ ಶರಣ್ಯಂ
ಶ್ರೀರಾಘವಂ ಮರಕತೋಪಲಕಾಂತಿಕಾಂತಮ್ ॥
ಸೀತಾಸಮೇತಮನಿಶಂ ಧೃತಚಾಪಬಾಣಂ
ಸುಗ್ರೀವಲಕ್ಷ್ಮಣವಿಭೀಷಣಸೇವಿತಾಂಘ್ರಿಮ್ ॥೫೪॥

೫೩-೫೪. ಸಮಸ್ತಪಾಪಗಳಿಂದಲೂ ಬಿಡಲ್ಪಟ್ಟವನಾಗಿ ವಿಷ್ಣು ಲೋಕಕ್ಕೆ ಹೋಗಲಿರುವೆ. ಹಾಗಿಲ್ಲವಾದರೆ ಸದ್ಗತಿಗೆ ಹಿಂದಿರುಗದ ಸ್ಥಿತಿಯಲ್ಲಿ ಕೆಳಕೆಳಕ್ಕೆ ಹೋಗಿಬಿಡುವೆ. ನನ್ನ ಮಾತನ್ನು ಒಪ್ಪಿಕೊ. ನಿನಗೆ ಹಿತವನ್ನೇ ಹೇಳುತ್ತಿರುವೆನು. ಸತ್ಸಂಗವನ್ನು ಮಾಡು. ಹಾಗೂ ನೀಲವಜ್ರದಂತೆ ಕಾಂತಿಯುಳ್ಳ ಸೀತಾಸಮೇತನಾದ, ಧನುರ್ಬಾಣಗಳನ್ನು ಧರಿಸಿರುವ, ಸುಗ್ರೀವ, ಲಕ್ಷ್ಮಣ, ವಿಭೀಷಣರುಗಳಿಂದ ಸೇವಿಸಲ್ಪಟ್ಟ ಪಾದಗಳುಳ್ಳ ಶರಣ್ಯನಾದ ಹರಿಯನ್ನು (ಶ್ರೀರಾಮನನ್ನು) ಯಾವಾಗಲೂ ಭಜಿಸುವವನಾಗು.

ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ
ಚತುರ್ಥಃ ಸರ್ಗಃ

## ಐದನೆಯ ಸರ್ಗ

ಶ್ರೀ ಮಹಾದೇವ ಉವಾಚ—

ಶ್ರುತ್ವಾ ಶುಕಮುಖೋದ್ಗೀತಂ ವಾಕ್ಯಮಜ್ಞಾನನಾಶನಮ್ ।
ರಾವಣಃ ಕ್ರೋಧತಾಮ್ರಾಕ್ಷಃ ದಹನ್ನಿವ ತಮಬ್ರವೀತ್ ॥೧॥
ಅನುಜೀವ್ಯ ಸುದುರ್ಬುದ್ಧೇ ಗುರುವದ್ ಭಾಷಸೇ ಕಥಮ್ ।
ಶಾಸಿತಾಹಂ ತ್ರಿಜಗತಾಂ ತ್ವಂ ಮಾಂ ಶಿಕ್ಷನ್ ನ ಲಜ್ಜಸೇ ॥೨॥
ಇದಾನೀಮೇವ ಹನ್ಮಿ ತ್ವಾಂ ಕಿಂ ತು ಪೂರ್ವಕೃತಂ ತವ ।
ಸ್ಮರಾಮಿ ತೇನ ರಕ್ಷಾಮಿ ತ್ವಾಂ ಯದ್ಯಪಿ ವಧೋಚಿತಮ್ ॥೩॥

೧-೩. ಶ್ರೀಮಹಾದೇವನಿಂತೆಂದನು : ಶುಕನ ಮುಖದಿಂದ ಹೊರಬಂದ ಅಜ್ಞಾನನಾಶಕವಾದ ಮಾತನ್ನು ಕೇಳಿ ರಾವಣನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಸುಡುವವನಂತೆ ನೋಡುತ್ತಾ ಹೀಗೆಂದನು : "ಎಲವೊ, ದುರ್ಬುದ್ಧಿಯೆ, ನನ್ನನ್ನು ಆಶ್ರಯಿಸಿ ಬದುಕಿದ್ದು ಈಗ ಗುರುವಿನಂತೆ ಮಾತನಾಡುವೆಯಲ್ಲವೆ ? ಇದು ಹೇಗೆ ? ನಾನು ಮೂರು ಲೋಕಗಳಿಗೂ ಒಡೆಯನು.

ನೀನು ನನಗೆ ಬುದ್ಧಿಹೇಳಲು ನಾಚಿಕೆಯಾಗುವದಿಲ್ಲವೆ? ನಿನ್ನನ್ನು ಈಗಲೆ ನಾನು ಕೊಲ್ಲುತ್ತಿದ್ದೆನು. ಆದರೆ ನೀನು ಹಿಂದೆ ಮಾಡಿದ (ಉಪಕಾರವನ್ನು) ನೆನೆಸಿ ವಧಾರ್ಹನಾಗಿರುವೆಯಾದರೂ ಕಾಪಾಡಿರುವೆನು.

ಇತೋ ಗಚ್ಛ ವಿಮೂಢ ತ್ವಮೇವಂ ಶ್ರೋತುಂ ನ ಮೇ ಕ್ಷಮಮ್ ।
ಮಹಾಪ್ರಸಾದ ಇತ್ಯುಕ್ತ್ವಾ ವೇಪಮಾನೋ ಗೃಹಂ ಯಯೌ ॥೪॥

೪. 'ಎಲೈ ಮೂಢನೆ, ಇಲ್ಲಿಂ ತೊಲಗು ; ಹೀಗೆಲ್ಲ ಹರಟುವ ನಿನ್ನ ಮಾತು ನನಗೆ ಕೇಳಲು ತಕ್ಕದ್ದಾಗಿರುವದಿಲ್ಲ' ಎಂದನು. ಆಗ ಅವನು 'ಮಹಾಪ್ರಸಾದ' ಎಂದು ಹೇಳುವವನಾಗಿ ನಡುಗುತ್ತಾ ಮನೆಗೆ ಹೋದನು.

ಶುಕೋಽಪಿ ಬ್ರಾಹ್ಮಣಃ ಪೂರ್ವಂ ಬ್ರಹ್ಮಿಷ್ಠೋ ಬ್ರಹ್ಮವಿತ್ತಮಃ ।
ವಾನಪ್ರಸ್ಥವಿಧಾನೇನ ವನೇ ತಿಷ್ಠನ್ ಸ್ವಕರ್ಮಕೃತ್ ॥೫॥
ದೇವಾನಾಮಭಿವೃದ್ಧ್ಯರ್ಥಂ ವಿನಾಶಾಯ ಸುರದ್ವಿಷಾಮ್ ।
ಚಕಾರ ಯಜ್ಞವಿತತಿಮವಿಚ್ಛಿನ್ನಾಂ ಮಹಾಮತಿಃ ॥೬॥
ರಾಕ್ಷಸಾನಾಂ ವಿರೋಧೋಽಭೂತ್ ಶುಕೋ ದೇವಹಿತೋದ್ಯತಃ ।
ವಜ್ರದಂಷ್ಟ್ರ ಇತಿ ಖ್ಯಾತಃ ತತ್ರೈಕೋ ರಾಕ್ಷಸೋ ಮಹಾನ್ ॥೭॥
ಅಂತರಂ ಪ್ರೇಪ್ಸುರಾತಿಷ್ಠತ್ ಶುಕಾಪಕರಣೋದ್ಯತಃ ।

೫-೭. ಮಹಾಮತಿಯಾದ ಶುಕನುಕೂಡ ಬ್ರಹ್ಮ(ವೇದ)ನಿಷ್ಠನಾದ ಬ್ರಹ್ಮವನ್ನು ಬಲ್ಲ ಬ್ರಾಹ್ಮಣನಾಗಿದ್ದನು. ವಾನಪ್ರಸ್ಥಾಶ್ರಮದಲ್ಲಿದ್ದುಕೊಂಡು ಕಾಡಿನಲ್ಲಿ ತನ್ನ ಕಾರ್ಯಗಳನ್ನು ನೆರವೇರಿಸುತ್ತಾ ರಾಕ್ಷಸರ ವಿನಾಶಕ್ಕೂ ದೇವತೆಗಳ ಪುರೋಭಿವೃದ್ಧಿಗೂ ಸಾಲುಸಾಲಾಗಿ ಯಜ್ಞಗಳನ್ನು ಮಾಡುತ್ತಿದ್ದನು. ಶುಕನು ಹೀಗೆ ದೇವತೆಗಳಿಗೆ ಅನುಕೂಲನಾಗಿರುವ ವಿಷಯವು ರಾಕ್ಷಸರೊಡನೆ ವಿರೋಧಕ್ಕೆ ಕಾರಣವಾಗಿಬಿಟ್ಟಿತು. ಆಗ ರಾಕ್ಷಸರಲ್ಲೊಬ್ಬನಾದ ವಜ್ರದಂಷ್ಟ್ರನೆಂದು ಪ್ರಸಿದ್ಧನಾದವನು ಈ ಶುಕನಿಗೆ ಅಪಕಾರವನ್ನೆಸಗಲು ಸಮಯವನ್ನು ಕಾಯ್ದುಕೊಂಡಿದ್ದನು.

ಕದಾಚಿದಾಗತೋಽಗಸ್ತ್ಯಃ ತಸ್ಯಾಶ್ರಮಪದಂ ಮುನೇಃ ।
ತೇನ ಸಂಪೂಜಿತೋಽಗಸ್ತ್ಯೋ ಭೋಜನಾರ್ಥಂ ನಿಮಂತ್ರಿತಃ ॥೮॥
ಗತೇ ಸ್ನಾತುಂ ಮುನೌ ಕುಂಭಸಂಭವೇ ಪ್ರಾಪ್ಯ ಚಾಂತರಮ್ ।
ಅಗಸ್ತ್ಯರೂಪಧೃಕ್ ಸೋಽಪಿ ರಾಕ್ಷಸಃ ಶುಕಮಬ್ರವೀತ್ ॥೯॥
ಯದಿ ದಾಸ್ಯಸಿ ಮೇ ಬ್ರಹ್ಮನ್ ಭೋಜನಂ ದೇಹಿ ಸಾಮಿಷಮ್ ।
ಬಹುಕಾಲಂ ನ ಭುಕ್ತಂ ಮೇ ಮಾಂಸಂ ಛಾಗಾಂಗಸಂಭವಮ್ ।೧೦।

೮-೧೦. ಒಮ್ಮೆ ಆ (ಶುಕ)ಮುನಿಯ ಆಶ್ರಮಕ್ಕೆ ಅಗಸ್ತ್ಯನು ಬಂದನು. ಅವನಿಂದ ಪೂಜಿಸಲ್ಪಟ್ಟ ಅಗಸ್ತ್ಯನು ಊಟಕ್ಕೆ ಆಹ್ವಾನಿಸಲ್ಪಟ್ಟನು. ಆ ಅಗಸ್ತ್ಯ ಮುನಿಯು ಸ್ನಾನಕ್ಕೆ ಹೋಗಿರಲಾಗಿ ಸಮಯವನ್ನು ಸಾಧಿಸಿ ಆ ರಾಕ್ಷಸನು ಅಗಸ್ತ್ಯರ ರೂಪವನ್ನು ಧರಿಸಿ ಬಂದು ಶುಕನನ್ನು ಕುರಿತು ಹೀಗೆಂದನು : 'ಎಲೈ ಬ್ರಾಹ್ಮಣನೆ, ನಾನು ಬಹಳಕಾಲದಿಂದ ಹೋತದ ಮಾಂಸವನ್ನು ಊಟ ಮಾಡಿಲ್ಲ. ಆದ್ದರಿಂದ ಮಾಂಸಸಹಿತವಾದ ಊಟವನ್ನು ಕೊಡುವವನಾಗು.'

ತಥೇತಿ ಕಾರಯಾಮಾಸ ಮಾಂಸಭೋಜ್ಯಂ ಸುವಿಸ್ತರಮ್ ।
ಉಪವಿಷ್ಟೇ ಮುನೌ ಭೋಕ್ತುಂ ರಾಕ್ಷಸೋಽತೀವಸುಂದರಮ್ ॥೧೧॥
ಶುಕಭಾರ್ಯಾವಪುರ್ಧೃತ್ವಾ ತಾಂ ಚಾಂತರ್ಮೋಹಯನ್ ಖಲಃ ।
ನರಮಾಂಸಂ ದದೌ ತಸ್ಮೈ ಸುಪಕ್ವಂ ಬಹು ವಿಸ್ತರಮ್ ॥೧೨॥
ದತ್ತ್ವೈವಾಂತರ್ದಧೇ ರಕ್ಷಃ ತತೋ ದೃಷ್ಟ್ವಾ ಚುಕೋಪ ಸಃ ।

೧೧-೧೩. ಹಾಗೆಯೇ ಆಗಲೆಂದು ಬಗೆಬಗೆಯ ಮಾಂಸಾಹಾರಗಳನ್ನು ಮಾಡಿಸಿದನು. (ಅಗಸ್ತ್ಯ)ಮುನಿಯು ಊಟಮಾಡಲು ಕುಳಿತಾಗ ರಾಕ್ಷಸನು ಸುಂದರವಾದ ಶರೀರದಿಂದ ಶುಕನ ಹೆಂಡತಿಯ ವೇಷವನ್ನು ಧರಿಸಿ ಆಕೆಯನ್ನೂ ಒಳಗೆ ವಂಚಿಸಿ ರುಚಿಯಾದ ಬಗೆಬಗೆಯ ಊಟದ ಜೊತೆಯಲ್ಲಿ ಮನುಷ್ಯ ಮಾಂಸವನ್ನು ಕೊಟ್ಟನು. ಹಾಗೆಯೇ ಕೊಟ್ಟಕೂಡಲೆ ರಾಕ್ಷಸನು ಕಣ್ಮರೆಯಾಗಿ ಬಿಟ್ಟನು. ಅನಂತರ ಅದನ್ನು ಕಂಡು ಅಗಸ್ತ್ಯನು ಕೋಪಗೊಂಡನು.

ಅಮೇಧ್ಯಂ ಮಾನುಷಂ ಮಾಂಸಮಗಸ್ತ್ಯಃ ಶುಕಮಬ್ರವೀತ್ ।
ಅಭಕ್ಷ್ಯಂ ಮಾನುಷಂ ಮಾಂಸಂ ದತ್ತವಾನಸಿ ದುರ್ಮತೇ ॥೧೩॥
ಮಹ್ಯಂ ಸ ರಾಕ್ಷಸೋ ಭೂತ್ವಾ ತಿಷ್ಠ ತ್ವಂ ಮಾನುಷಾಶನಃ ।
ಇತಿ ಶಪ್ತಃ ಪುರೋ ಭೀತ್ಯಾ ಪ್ರಾಹಾಗಸ್ತ್ಯಂ ಮುನೇ ತ್ವಯಾ ॥೧೪॥
ಇದಾನೀಂ ಭಾಷಿತಂ ಮೇಽದ್ಯ ಮಾಂಸಂ ದೇಹೀತಿ ವಿಸ್ತರಮ್ ।
ತಥೈವ ದತ್ತಂ ಮೇ ದೇವ ಕಿಂ ಮೇ ಶಾಪಂ ಪ್ರದಾಸ್ಯಸಿ ॥೧೫॥

೧೩-೧೫. ಅಪವಿತ್ರವಾದ ಮನುಷ್ಯಮಾಂಸವನ್ನು ಕಂಡು (ಕೋಪಗೊಂಡ) ಅಗಸ್ತ್ಯನು ಶುಕನನ್ನು ಕುರಿತು ಹೀಗೆಂದನು : 'ಎಲೈ ದುರ್ಬುದ್ಧಿಯೆ, ತಿನ್ನಲು ಅಯೋಗ್ಯವಾದ ಮನುಷ್ಯಮಾಂಸವನ್ನು ನೀನು ಕೊಟ್ಟಿರುವೆ. ಆದ್ದರಿಂದ ಆ ನೀನು ರಾಕ್ಷಸನಾಗಿ ಹುಟ್ಟಿ ನರರನ್ನು ತಿನ್ನುವವನಾಗು.' ಹೀಗೆಂದು ಶಪಿಸಲ್ಪಟ್ಟ ನಾನು ಭಯದಿಂದ ಹೀಗೆಂದೆನು : 'ಮುನಿಯೆ, ನೀನು ಈಗತಾನೆ ಮಾಂಸವನ್ನು ಕೊಡು– ಎಂದು ಹೇಳಿದವನಾಗಿದ್ದು ಆಮೇಲೆ ನಾನು ಕೊಟ್ಟದ್ದರಿಂದ ಮತ್ತೆ ನನಗೇ ಶಾಪವನ್ನೇಕೆ ಕೊಡುವೆ ?' (ಎಂದನು).

ಶ್ರುತ್ವಾ ಶುಕಸ್ಯ ವಚನಂ ಮುಹೂರ್ತಂ ಧ್ಯಾನಮಾಸ್ಥಿತಃ ।
ಜ್ಞಾತ್ವಾ ರಕ್ಷಃ ಕೃತಂ ಸರ್ವಂ ತತಃ ಪ್ರಾಹ ಶುಕಂ ಸುಧೀಃ ॥೧೬॥
ತವಾಪಕಾರಿಣಾ ಸರ್ವಂ ರಾಕ್ಷಸೇನ ಕೃತಂ ತ್ವಿದಮ್ ।
ಅವಿಚಾರ್ಯೈವ ಮೇ ದತ್ತಃ ಶಾಪಸ್ತೇ ಮುನಿಸತ್ತಮ ॥೧೭॥
ತಥಾಪಿ ಮೇ ವಚೋಽಮೋಘಮೇವಮೇವ ಭವಿಷ್ಯತಿ ।

೧೬-೧೭. ಶುಕನ ಮಾತನ್ನು ಕೇಳಿ (ಅಗಸ್ತ್ಯನು) ಒಂದು ಮುಹೂರ್ತ ಕಾಲ ಅಂತರ್ಮುಖನಾಗಿ ಚಿಂತಿಸಿ ರಾಕ್ಷಸನು ಮಾಡಿದ (ಮೋಸವನ್ನು) ಅರಿತವನಾಗಿ ಆ ಮುನಿಯು ಶುಕನಿಗೆ ಹೀಗೆಂದನು: 'ನಿನಗೆ ಕೆಟ್ಟದ್ದನ್ನು ಮಾಡುವ ಉದ್ದೇಶವುಳ್ಳ ರಾಕ್ಷಸನಿಂದ ಇದೆಲ್ಲವೂ ಮಾಡಲ್ಪಟ್ಟಿತು. ನಾನಾದರೋ, ವಿಚಾರಮಾಡದೆಯೇ ಎಲೈ ಮುನಿಶ್ರೇಷ್ಠನೆ, ನಿನಗೆ ಶಾಪವನ್ನು ಕೊಟ್ಟುಬಿಟ್ಟೆನು. ಆದರೂ ನನ್ನ ಮಾತು ವ್ಯರ್ಥವಾಗಲಾರದು. ಅದು ಹಾಗೆಯೇ ಆಗಲಿದೆ.

ರಾಕ್ಷಸಂ ವಪುರಾಸ್ಥಾಯ ರಾವಣಸ್ಯ ಸಹಾಯಕೃತ್ ।
ತಿಷ್ಠ ತಾವದ್ಯದಾ ರಾಮೋ ದಶಾನನವಧಾಯ ಹಿ ।
ಆಗಮಿಷ್ಯತಿ ಲಂಕಾಯಾಃ ಸಮೀಪಂ ವಾನರೈಃ ಸಹ ॥೧೮॥
ಪ್ರೇಷಿತೋ ರಾವಣೇನ ತ್ವಂ ಚಾರೋ ಭೂತ್ವಾ ರಘೂತ್ತಮಮ್ ।
ದೃಷ್ಟ್ವಾ ಶಾಪಾದ್ ವಿನಿರ್ಮುಕ್ತೋ ಬೋಧಯಿತ್ವಾ ಚ ರಾವಣಮ್ ।
ತತ್ತ್ವಜ್ಞಾನಂ ತತೋ ಮುಕ್ತಃ ಪರಂ ಪದಮವಾಪ್ಸ್ಯಸಿ ।
ಇತ್ಯುಕ್ತೋಽಗಸ್ತ್ಯಮುನಿನಾ ಶುಕೋ ಬ್ರಾಹ್ಮಣಸತ್ತಮಃ ॥೨೦॥
ಬಭೂವ ರಾಕ್ಷಸಃ ಸದ್ಯೋ ರಾವಣಂ ಪ್ರಾಪ್ಯ ಸಂಸ್ಥಿತಃ ।

೧೮-೨೦. ನೀನು ರಾಕ್ಷಸಶರೀರವನ್ನು ಧರಿಸಿ ರಾವಣನಿಗೆ ಸಹಾಯಕನಾಗಿದ್ದುಕೊಂಡಿರು. ಯಾವಾಗ ಶ್ರೀರಾಮನು ರಾವಣಸಂಹಾರಕ್ಕಾಗಿ ಕಪಿಗಳೊಡಗೂಡಿ ಲಂಕೆಯ ಸಮೀಪಕ್ಕೆ ಬರುವನೋ ಆಗ ನೀನು (ಗೂಢ) ಚಾರನಾಗಿ ರಾವಣನಿಂದ ಕಳುಹಿಸಲ್ಪಟ್ಟವನಾಗಿ ರಾಮನ ಬಳಿಗೆ ಬಂದು ಆತನನ್ನು ಕಂಡು ಶಾಪದಿಂದ ಬಿಡುಗಡೆಹೊಂದಿದವನಾಗಿ ರಾವಣನನ್ನು ಕುರಿತು ತತ್ತ್ವಬೋಧೆಯನ್ನು ಮಾಡಿದವನಾಗಿ ಅವನಿಂದ ಬಿಡುಗಡೆಹೊಂದಿ ಪರಮಪದವಿಯನ್ನು ಸೇರುವೆ'- ಹೀಗೆಂದು ಬ್ರಾಹ್ಮಣಶ್ರೇಷ್ಠನಾದ ಶುಕನು ಅಗಸ್ತ್ಯನಿಂದ ಹೇಳಲ್ಪಟ್ಟವನಾಗಿ ಕೂಡಲೆ ರಾಕ್ಷಸನಾಗಿ ರಾವಣನನ್ನು ಬಂದು ಸೇರಿದನು.

ಇದಾನೀಂ ಚಾರರೂಪೇಣ ದೃಷ್ಟ್ವಾ ರಾಮಂ ಸಹಾನುಜಮ್ ।
ರಾವಣಂ ತತ್ತ್ವವಿಜ್ಞಾನಂ ಬೋಧಯಿತ್ವಾ ಪುನರ್ದ್ರುತಮ್ ॥೨೧॥
ಪೂರ್ವವದ್ ಬ್ರಾಹ್ಮಣೋ ಭೂತ್ವಾ ಸ್ಥಿತೋ ವೈಖಾನಸೈಃ ಸಹ ।

೨೧. ಈಗ ಗೂಢಚಾರವೇಷದಿಂದ ಬಂದು ಸೋದರಸಹಿತನಾದ ಶ್ರೀರಾಮನನ್ನು ಕಂಡು ಅಲ್ಲಿಂದ ಹಿಂದಿರುಗಿ ರಾವಣನಲ್ಲಿಗೆ ಬಂದು ಅವನಿಗೆ ತತ್ತ್ವಜ್ಞಾನವನ್ನುಪದೇಶಿಸಿ ಮತ್ತೆ ಜಾಗ್ರತೆಯಾಗಿ ಅಲ್ಲಿಂದ ಹೊರಟು ಹಿಂದಿನಂತೆಯೇ ಬ್ರಾಹ್ಮಣನಾಗಿ ತಪಸ್ವಿಗಳೊಡನೆ ಇದ್ದುಕೊಂಡಿರುವನು.

ತತಃ ಸಮಾಗಮದ್ ವೃದ್ಧೋ ಮಾಲ್ಯವಾನ್ ರಾಕ್ಷಸೋ ಮಹಾನ್ ।
ಬುದ್ಧಿಮಾನ್ನೀತಿನಿಪುಣೋ ರಾಜ್ಞೋ ಮಾತುಃ ಪ್ರಿಯಃ ಪಿತಾ ॥೨೨॥
ಪ್ರಾಹ ತಂ ರಾಕ್ಷಸಂ ವೀರಂ ಪ್ರಶಾಂತೇನಾಂತರಾತ್ಮನಾ ।
ಶೃಣು ರಾಜನ್ ವಚೋ ಮೇಽದ್ಯ ಶ್ರುತ್ವಾ ಕುರು ಯಥೇಪ್ಸಿತಮ್ ॥
ಯದಾ ಪ್ರವಿಷ್ಟಾ ನಗರೀಂ ಜಾನಕೀ ರಾಮವಲ್ಲಭಾ ।
ತದಾದಿ ಪುರ್ಯಾಂ ದೃಶ್ಯಂತೇ ನಿಮಿತ್ತಾನಿ ದಶಾನನ ॥೨೪॥

೨೨-೨೪. ಅನಂತರ ವೃದ್ಧನೂ ಬುದ್ಧಿವಂತನೂ ನೀತಿನಿಪುಣನೂ ರಾಜನಾದ (ರಾವಣನ) ತಾಯಿಯ ತಂದೆಯೂ ಆದ ಮಾಲ್ಯವಂತನೆಂಬ ರಾಕ್ಷಸನು ವೀರನಾದ ರಾಕ್ಷಸ (ರಾವಣ)ನನ್ನು ಕುರಿತು ಸಮಾಧಾನಚಿತ್ತದಿಂದ ಹೀಗೆಂದನು : 'ಎಲೈ ರಾಜನೆ, ನನ್ನ ಈ ಮಾತನ್ನು ಕೇಳು. ಕೇಳಿದ ಅನಂತರ ನಿನಗೆ ಇಷ್ಟಬಂದಂತೆ ನಡೆದುಕೊ. ರಾಮನ ಹೆಂಡತಿಯಾದ ಸೀತೆಯು ಯಾವಾಗ ಲಂಕೆಗೆ ಬಂದಳೋ ಆಗಿನಿಂದ ಈ ಪಟ್ಟಣದಲ್ಲಿ (ಕೆಟ್ಟ) ಶಕುನಗಳು ಕಂಡುಬರುತ್ತಿದೆ

ಘೋರಾಣಿ ನಾಶಹೇತೂನಿ ತಾನಿ ಮೇ ವದತಃ ಶೃಣು ।
ಖರಸ್ತನಿತನಿರ್ಘೋಷಾ ಮೇಘಾ ಅತಿಭಯಂಕರಾಃ ॥೨೫॥
ಶೋಣಿತೇನಾಭಿವರ್ಷಂತಿ ಲಂಕಾಮುಷ್ಣೇನ ಸರ್ವದಾ ।
ರುದಂತಿ ದೇವಲಿಂಗಾನಿ ಸ್ವಿದ್ಯಂತಿ ಪ್ರಚಲಂತಿ ಚ ॥೨೬॥
ಕಾಳಿಕಾ ಪಾಂಡುರೈರ್ದಂತೈಃ ಪ್ರಹಸತ್ಯಗ್ರತಃ ಸ್ಥಿತಾ ।
ಖರಾ ಗೋಷು ಪ್ರಜಾಯಂತೇ ಮೂಷಕಾ ನಕುಲೈಃ ಸಹ ॥೨೭॥

೨೫-೨೭. ಭಯಂಕರವಾದ ಹಾಗೂ (ರಾಕ್ಷಸರ) ವಿನಾಶಕ್ಕೆ ಕಾರಣವಾದ ಅಂಥವುಗಳನ್ನು ಕೇಳು. ಬಹಳ ಹೆದರಿಕೆಯನ್ನುಂಟುಮಾಡುವ ಮೋಡಗಳು ಕತ್ತೆಗಳು ಕಿರಿಚಿದ ಧ್ವನಿಯಂತೆ ಶಬ್ದಮಾಡುತ್ತಾ ಯಾವಾಗಲೂ ಬಿಸಿಯಾದ ರಕ್ತದ (ವರ್ಣದ ನೀರಿನಿಂದ) ಲಂಕೆಯಮೇಲೆ ಮಳೆಗರೆಯುತ್ತಿವೆ. ದೇವಚಿಹ್ನೆಗಳು (ವಿಗ್ರಹ-ಮೂರ್ತ್ಯಾದಿಗಳು) ಕಣ್ಣೀರುಹಾಕುತ್ತಿವೆ. ಬೆವರುತ್ತಿವೆ. ಸ್ಥಳದಿಂದ ಅಳ್ಳಾಡುತ್ತಿವೆ. ಕಾಳಿದೇವತೆಯು ತನ್ನ ಬಿಳುಪಾದ ಹಲ್ಲುಗಳಿಂದ ಎದುರುಗೊಂಡವಳಾಗಿ ನಿಂತು ನಗುತ್ತಿರುವಳು. ಗೋವುಗಳು ಕತ್ತೆಮರಿಗಳನ್ನು ಹಡೆಯುತ್ತಿವೆ. ಇಲಿಗಳು ಮುಂಗುಸಿಗಳೊಡನೆ ಹೊಡೆದಾಡುತ್ತಿವೆ.

ಮಾರ್ಜಾರೇಣ ತು ಯುಧ್ಯಂತಿ ಪನ್ನಗಾ ಗರುಡೇನ ತು ।
ಕರಾಲೋ ವಿಕಟೋ ಮುಂಡಃ ಪುರುಷಃ ಕೃಷ್ಣಪಿಂಗಲಃ ॥೨೮॥

ಕಾಲೋ ಗೃಹಾಣಿ ಸರ್ವೇಷಾಂ ಕಾಲೇ ಕಾಲೇ ತ್ವವೇಕ್ಷತೇ ।
ಏತಾನ್ಯನ್ಯಾನಿ ದೃಶ್ಯಂತೇ ನಿಮಿತ್ತಾನ್ಯುದ್ಭವಂತಿ ಚ ॥೨೯॥

ಅತಃ ಕುಲಸ್ಯ ರಕ್ಷಾರ್ಥಂ ಶಾಂತಿಂ ಕುರು ದಶಾನನ ।
ಸೀತಾಂ ಸತ್ಕೃತ್ಯ ಸಧನಾಂ ರಾಮಾಯಾಶು ಪ್ರಯಚ್ಛ ಭೋ ॥೩೦॥

೨೮-೩೦. ಹಾಗೆಯೇ (ಇಲಿಗಳು) ಬೆಕ್ಕುಗಳೊಡನೆಯೂ ಹಾವುಗಳು ಗರುಡಪಕ್ಷಿಯೊಡನೆಯೂ ಬಡಿದಾಡುತ್ತಿವೆ. ವಿಕಾರರೂಪನಾದ, ವಕ್ರನೂ, ಬೋಳನೂ, ಕೆಂಗಣ್ಣುಗಳುಳ್ಳವನೂ ಆದ ಕಾಲಪುರುಷನು ಆಗಾಗ್ಗೆ ಎಲ್ಲರ ಮನೆಗಳನ್ನೂ ಇಣ್ಣಿಟ್ಟು ನೋಡುತ್ತಿರುವನು. ಇದೇ ಮುಂತಾದ ಶಕುನಗಳು ಕಂಡುಬರುತ್ತಿವೆ ಹಾಗೂ ಉಂಟಾಗುತ್ತಿವೆ. ಆದ್ದರಿಂದ ಎಲೈ ರಾವಣನೆ, ರಾಕ್ಷಸಕುಲವನ್ನು ಕಾಪಾಡಲು ಧನಸಹಿತಳಾದ ಸೀತೆಯನ್ನು ಗೌರವಿಸಿ ಜಾಗ್ರತೆಯಾಗಿ ರಾಮನಿಗೆ ಅರ್ಪಿಸಿಬಿಡು. ಆ ಮೂಲಕ ಶಾಂತಿಯನ್ನು ಆಚರಿಸುವವನಾಗು.

ರಾಮಂ ನಾರಾಯಣಂ ವಿದ್ಧಿ ವಿದ್ವೇಷಂ ತ್ಯಜ ರಾಘವೇ ।
ಯತ್ಪಾದಪೋತಮಾಶ್ರಿತ್ಯ ಜ್ಞಾನಿನೋ ಭವಸಾಗರಮ್ ॥೩೦॥

ತರಂತಿ ಭಕ್ತಿಪೂತಾಂತಾಸ್ತತೋ ರಾಮೋ ನ ಮಾನುಷಃ ।
ಭಜಸ್ವ ಭಕ್ತಿಭಾವೇನ ರಾಮಂ ಸರ್ವಹೃದಾಲಯಮ್ ॥೩೧॥

ಯದ್ಯಪಿ ತ್ವಂ ದುರಾಚಾರೋ ಭಕ್ತ್ಯಾ ಪೂತೋ ಭವಿಷ್ಯಸಿ ।
ಮದ್ವಾಕ್ಯಂ ಕುರು ರಾಜೇಂದ್ರ ಕುಲಕೌಶಲಹೇತವೇ ॥೩೩॥

೩೧-೩೩. ರಾಮನನ್ನು ನಾರಾಯಣನೆಂದು ತಿಳಿ. ರಾಘವನಲ್ಲಿ ವೈರತನವನ್ನು ಬಿಡು. ಯಾವಾತನ ಪಾದಗಳೆಂಬ ತೆಪ್ಪವನ್ನಾಶ್ರಯಿಸಿ ಜ್ಞಾನಿಗಳು ಭವಸಾಗರವನ್ನು ದಾಟುವರೋ, ಭಕ್ತಿಯಿಂದ ಪರಿಶುದ್ಧವಾದ ಅಂತಃಕರಣವುಳ್ಳವರಾಗುವರೋ ಅಂಥ ರಾಮನು ಎಂದೆಂದಿಗೂ ಮನುಷ್ಯಮಾತ್ರನಲ್ಲ. ಎಲ್ಲರ ಹೃದಯದೇಶವನ್ನೇ ಮನೆಯಾಗಿ ಮಾಡಿಕೊಂಡಿರುವ ರಾಮನನ್ನು ಭಕ್ತಿಯಿಂದ ಸೇವಿಸು. ಒಂದುವೇಳೆ ಕೆಟ್ಟ ನಡತೆಯುವನಾಗಿದ್ದರೂ ಭಕ್ತಿಯಿಂದ ಪವಿತ್ರನಾಗುವೆ. ಎಲೈ ರಾಜೇಂದ್ರನೆ, ಕುಲದ ಕ್ಷೇಮಕ್ಕಾಗಿ ನನ್ನ ಮಾತನ್ನು ನಡೆಯಿಸುವವನಾಗು.

ತತ್ತು ಮಾಲ್ಯವತೋ ವಾಕ್ಯಂ ಹಿತಮುಕ್ತಂ ದಶಾನನಃ ।
ನ ಮರ್ಷಯತಿ ದುಷ್ಟಾತ್ಮಾ ಕಾಲಸ್ಯ ವಶಮಾಗತಃ ॥೩೪॥

ಮಾನವಂ ಕೃಪಣಂ ರಾಮಮೇಕಂ ಶಾಖಾಮೃಗಾಶ್ರಯಮ್ ।
ಸಮರ್ಥಂ ಮನ್ಯಸೇ ಕೇನ ಹೀನಂ ಪಿತ್ರಾ ಮುನಿಪ್ರಿಯಮ್ ॥೩೫॥
ರಾಮೇಣ ಪ್ರೇಷಿತೋ ನೂನಂ ಭಾಷಸೇ ತ್ವಮನರ್ಗಲಮ್ ।
ಗಚ್ಛ ವೃದ್ಧೋಽಸಿ ಬಂಧುಸ್ತ್ವಂ ಸೋಢಂ ಸರ್ವಂ ತ್ವಯೋದಿತಮ್ ॥
ಇತೋ ಮತ್ಕರ್ಣಪದವೀಂ ದಹತ್ಯೇತದ್ವಚಸ್ತವ ।
ಇತ್ಯುಕ್ತ್ವಾ ಸರ್ವಸಚಿವೈಃ ಸಹಿತಃ ಪ್ರಸ್ಥಿತಸ್ತದಾ ॥೩೭॥

೩೪-೩೭. ಆ ಮಾಲ್ಯವಂತನ ಹಿತವಾದ ವಾಕ್ಯವನ್ನು ರಾವಣನು ಕಾಲವಶನಾಗಿದ್ದುದರಿಂದ ಸಹಿಸಲಾರದಾದನು. "ಕೃಪಣನೂ ಮನುಷ್ಯಮಾತ್ರನೂ ಏಕಾಕಿಯೂ, ಕಪಿಗಳ ಸಹಾಯವುಳ್ಳವನೂ ತಂದೆಯಿಲ್ಲದವನೂ ಋಷಿಗಳಿಗೆ ಪ್ರಿಯನೂ ಆದ ರಾಮನನ್ನು ಬಹಳ ಗಟ್ಟಿಗನೆಂದು ನಂಬಿರುವೆಯಲ್ಲವೆ ? ಅದು ಹೇಗೆ ? ನೀನಾದರೊ, ನಿಜವಾಗಿಯೂ ರಾಮನಿಂದ ಕಳುಹಿಸಲ್ಪಟ್ಟವನಂತೆಯೇ ಅಡೆತಡೆಯಿಲ್ಲದೆ ಮಾತನಾಡುತ್ತಿರುವೆ. ನೀನು ಮುದುಕನಾಗಿರುವೆ; ನನ್ನ ಬಂಧುವೂ ಹೌದು. ಆದ್ದರಿಂದ ನೀನು ಹೇಳಿದ್ದನ್ನೆಲ್ಲ ಸಹಿಸಿಕೊಂಡೆನು. ಇನ್ನುಮುಂದೆ ಮಾತನಾಡಿದೆಯಾದರೆ ನನ್ನ ಕಿವಿಗಳಿಗೆ ಸುಡುವಂತಾಗುತ್ತದೆ. ಆದ್ದರಿಂದ ಇಲ್ಲಿಂದ ಹೊರಡು." ಹೀಗೆಂದು ಹೇಳಿ ಎಲ್ಲಾ ಮಂತ್ರಿಗಳೊಡನೆ ಕೂಡಿದವನಾಗಿ (ರಾವಣನು) ಹೊರಟುಬಿಟ್ಟನು.

ಪ್ರಾಸಾದಾಗ್ರೇ ಸಮಾಸೀನಃ ಪಶ್ಯನ್ ವಾನರಸೈನಿಕಾನ್ ।
ಯುದ್ಧಾಯಾಯೋಜಯತ್ ಸರ್ವರಾಕ್ಷಸಾನ್ ಸಮುಪಸ್ಥಿತಾನ್ ॥

೩೮. ಉಪ್ಪರಿಗೆಯ ಮೇಲುಭಾಗದಲ್ಲಿ ಕುಳಿತವನಾಗಿ ವಾನರರ ಸೈನ್ಯವನ್ನು ನೋಡುತ್ತಾ ಸನ್ನದ್ಧರಾಗಿದ್ದ ಎಲ್ಲಾ ರಾಕ್ಷಸರನ್ನೂ ಯುದ್ಧಕ್ಕೆ ಪ್ರೇರಿಸಿದನು.

ರಾಮೋಽಪಿ ಧನುರಾದಾಯ ಲಕ್ಷ್ಮಣೇನ ಸಮಾಹೃತಮ್ ।
ದೃಷ್ಟ್ವಾ ರಾವಣಮಾಸೀನಂ ಕೋಪೇನ ಕಲುಷೀಕೃತಃ ॥೩೯॥
ಕಿರೀಟಿನಂ ಸಮಾಸೀನಂ ಮಂತ್ರಿಭಿಃ ಪರಿವೇಷ್ಟಿತಮ್ ।
ಶಶಾಂಕಾರ್ಧನಿಭೇನೈವ ಬಾಣೇನೈಕೇನ ರಾಘವಃ ॥೪೦॥
ಶ್ವೇತಚ್ಛತ್ರಸಹಸ್ರಾಣಿ ಕಿರೀಟದಶಕಂ ತಥಾ ।
ಚಿಚ್ಛೇದ ನಿಮಿಷಾರ್ಧೇನ ತದದ್ಭುತಮಿವಾಭವತ್ ॥೪೧॥

೩೯-೪೧. ಶ್ರೀರಾಮನೂ ಲಕ್ಷ್ಮಣನು ತಂದುಕೊಟ್ಟ ಧನುಸ್ಸನ್ನು ಕೈಗೆ ತೆಗೆದುಕೊಂಡು ಉಪ್ಪರಿಗೆಯಮೇಲೆ ಮಂತ್ರಿಗಳೊಡಗೂಡಿ ಕಿರೀಟಧಾರಿಯಾಗಿ ಕುಳಿತಿದ್ದ ರಾವಣನನ್ನು ಕಂಡು ಕೋಪದಿಂದ ಕದಡಿದ ಮನಸ್ಸುಳ್ಳವನಾಗಿ ಅರ್ಧಚಂದ್ರಾಕಾರವಾದ ಒಂದು ಬಾಣದಿಂದ ಆ ರಾವಣನ ಸಾವಿರಸಂಖ್ಯೆಯ ಬಿಳಿಯ ಛತ್ರಿಗಳ ಸಮೂಹವನ್ನೂ ಹತ್ತು ಕಿರೀಟಗಳನ್ನೂ ಅರ್ಧನಿಮಿಷದಲ್ಲಿ ಕತ್ತರಿಸಿಹಾಕಿಬಿಟ್ಟನು. ಅದೊಂದು ಅದ್ಭುತವಾದ ಕಾರ್ಯವಾಗಿ ಪರಿಣಮಿಸಿತು.

ಲಜ್ಜಿತೋ ರಾವಣಸ್ತೂರ್ಣಂ ವಿವೇಶ ಭವನಂ ಸ್ವಕಮ್ ।
ಆಹೂಯ ರಾಕ್ಷಸಾನ್ ಸರ್ವಾನ್ ಪ್ರಹಸ್ತಪ್ರಮುಖಾನ್ ಖಲಃ ।೪೨॥
ವಾನರೈಃ ಸಹ ಯುದ್ಧಾಯ ನೋದಯಾಮಾಸ ಸತ್ವರಃ ।
ತತೋ ಭೇರೀಮೃದಂಗಾದ್ಯೈಃ ಪಣವಾನಕಗೋಮುಖೈಃ ॥೪೩॥
ಮಹಿಷೋಷ್ಟ್ರೈಃ ಖರೈಃ ಸಿಂಹೈಃ ದ್ವೀಪಿಭಿಃ ಕೃತವಾಹನಾಃ ।
ಖಡ್ಗಶೂಲಧನುಃಪಾಶಯಷ್ಟಿತೋಮರಶಕ್ತಿಭಿಃ ॥೪೪॥
ಲಕ್ಷಿತಾಃ ಸರ್ವತೋ ಲಂಕಾಂ ಪ್ರತಿದ್ವಾರಮುಪಾಯಯುಃ ।

೪೨-೪೪. ನಾಚಿಕೊಂಡ ರಾವಣನು ಕೂಡಲೆ ತನ್ನ ಅರಮನೆಗೆ ಹಿಂದಿರುಗಿಬಿಟ್ಟನು. ಪ್ರಹಸ್ತನೇ ಮುಂತಾದ ಎಲ್ಲಾ ರಾಕ್ಷಸರನ್ನೂ ಕರೆಯಿಸಿ ಆ ದುಷ್ಟನು ಅವರೆಲ್ಲರನ್ನೂ ಕಪಿಗಳೊಡನೆ ಯುದ್ಧಮಾಡಲು ಪ್ರೇರೇಪಿಸಿದನು. ಅನಂತರ ಭೇರಿ, ಮೃದಂಗ, ಕಹಳೆ, ನಗಾರಿ, ಗೋಮುಖ- ಮುಂತಾದ ವಾದ್ಯಘೋಷಗಳೊಡನೆ, ಕೋಣ, ಒಂಟೆ, ಕತ್ತೆ, ಸಿಂಹ, ಆನೆಗಳನ್ನು ವಾಹನಗಳಾಗಿ ಮಾಡಿಕೊಂಡ ಯೋಧರುಗಳು ಕತ್ತಿ, ಭರ್ಜಿ, ಬಿಲ್ಲು, ಹಗ್ಗ, ಕೋಲು, ತೋಮರ, ಶಕ್ತಿ- ಮುಂತಾದ ಆಯುಧಗಳಿಂದ ಕೂಡಿದವರಾಗಿ ಲಂಕೆಯ ಎಲ್ಲಾ ಕಡೆಗೂ ಪ್ರತಿಯೊಂದು ಬಾಗಿಲಿಗೂ ಬಂದು ಸೇರಿದರು.

ತತಸ್ತ್ವಪರ್ವನೇವ ರಾಮೇಣ ನೋದಿತಾ ವಾನರರ್ಷಭಾಃ ।
ಉದ್ಯಮ್ಯ ಗಿರಿಶೃಂಗಾಣಿ ಶಿಖರಾಣಿ ಮಹಾಂತಿ ಚ ॥೪೫॥
ತರೂಂಶ್ಚೋತ್ಪಾಟ್ಯ ವಿವಿಧಾನ್ ಯುದ್ಧಾಯ ಹರಿಯೂಥಪಾಃ ।
ಪ್ರೇಕ್ಷಮಾಣಾ ರಾವಣಸ್ಯ ತಾನ್ಯನೀಕಾನಿ ಭಾಗಶಃ ॥೪೬॥
ರಾಘವಪ್ರಿಯಕಾಮಾರ್ಥಂ ಲಂಕಾಮಾರುರುಹುಸ್ತದಾ ।

೪೫-೪೬. ಅದಕ್ಕೆ ಮುಂಚೆಯೇ ರಾಮನಿಂದ ಪ್ರೇರಿತರಾದ ವಾನರ ಶ್ರೇಷ್ಠರು ಬೆಟ್ಟದ ಚೂರುಗಳನ್ನೂ ದೊಡ್ಡ ಶಿಖರಗಳನ್ನೂ ಎತ್ತಿಕೊಂಡು ಹಾಗೂ ನಾನಾವಿಧವಾದ ಮರಗಳನ್ನೆಲ್ಲ ಮುರಿದುಕೊಂಡು ಯುದ್ಧಸನ್ನದ್ಧರಾಗಿ ಆ ರಾವಣನ ಸೈನ್ಯವನ್ನು ವಿಂಗಡಿಸಿವಿಂಗಡಿಸಿ ನೋಡಿಕೊಂಡು (ನುಗ್ಗಿದರು). ಶ್ರೀರಾಮನಿಗೆ ಸಂತೋಷವುಂಟುಮಾಡುವದಕ್ಕಾಗಿ ಲಂಕೆಯನ್ನು ಏರಿದರು.

ತೇ ದ್ರುಮೈಃ ಪರ್ವತಾಗ್ರೈಶ್ಚ ಮುಷ್ಟಿಭಿಶ್ಚ ಪ್ಲವಂಗಮಾಃ ।
ತತಃ ಸಹಸ್ರಯೂಥಾಶ್ಚ ಕೋಟಿಯೂಥಾಶ್ಚ ಯೂಥಪಾಃ ॥೪೭॥
ಕೋಟೀಶತಯುತಾಶ್ಚಾನ್ಯೇ ರುರುಧುರ್ನಗರಂ ಭೃಶಮ್ ।
ಆಪ್ಲವಂತಃ ಪ್ಲವಂತಶ್ಚ ಗರ್ಜಂತಶ್ಚ ಪ್ಲವಂಗಮಾಃ ॥೪೮॥
ಜಯತ್ಯತಿಬಲೋ ರಾಮಃ ಲಕ್ಷ್ಮಣಶ್ಚ ಮಹಾಬಲಃ ।
ರಾಜಾ ಜಯತಿ ಸುಗ್ರೀವೋ ರಾಘವೇಣಾನುಪಾಲಿತಃ ॥೪೯॥
ಇತ್ಯೇವಂ ಘೋಷಯಂತಶ್ಚ ಸಮಂ ಯುಯುಧಿರೇಽರಿಭಿಃ ।

**ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರುಶಾಖೆ,**

**ನಂ. 68, ೨ನೆಯ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-560028**

(ಸಂಸ್ಥಾಪಕರು : ಪ. ಪ. ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು)

**1983ನೇ ಜೂನ್ ಮಾಹೆಯಲ್ಲಿ ನಡೆಯುವ**

## ವಿಶೇಷ ಉಪನ್ಯಾಸಗಳು

**ಸಂಜೆ 5 ರಿಂದ 6 ರ ವರೆಗೆ**

1. 4-6-83ನೆಯ ಶನಿವಾರ

ಶ್ರೀ ಲಲಿತವಿದ್ಯಾಮಂದಿರದ ಭಕ್ತಾದಿಗಳಿಂದ "ಯೋಗಾಸನಪ್ರದರ್ಶನ"

2. 5-6-83ನೆಯ ಭಾನುವಾರ

ವಿದ್ವಾನ್ ಶ್ರೀ ಕೆ. ಸೀತಾರಾಮಶಾಸ್ತ್ರಿಗಳವರಿಂದ "ಸಚ್ಚಿದಾನಂದಮನನ"

3. 11-6-83ನೆಯ ಶನಿವಾರ

ಅವಧೂತ ಶ್ರೀ ಸಿ. ವಿಶ್ವೇಶ್ವರಯ್ಯನವರಿಂದ "ಯೋಗವೂ ಆರೋಗ್ಯವೂ"

4. 12-6-83ನೆಯ ಭಾನುವಾರ

ಪ್ರೊ. ಬಿ. ಭೀಮಸೇನರಾವ್ M.Sc., ರವರಿಂದ
"ಕುಮಾರಸಂಭವದಲ್ಲಿ ಪರಮೇಶ್ವರಸಾಕ್ಷಾತ್ಕಾರ"

5. 18-6-83ನೆಯ ಶನಿವಾರ

ಪೂಜ್ಯ ನುಲೇನೂರು ಶ್ರೀನಿವಾಸಮೂರ್ತಿಗಳವರಿಂದ "ಪಂಚಕೋಶವಿವೇಕ"

6. 19-6-83ನೆಯ ಭಾನುವಾರ

ಪಂಡಿತ ಶ್ರೀ ಕೆ. ಜಿ. ಸುಬ್ರಾಯಶರ್ಮರಿಂದ "ಸಂಸಾರ"

7. 25-6-83ನೆಯ ಶನಿವಾರ

ವಿದ್ವಾನ್ ಕೆ. ಎಸ್. ಕಣ್ಣನ್ M.A., ರವರಿಂದ
"ಕಾಳಿದಾಸನೂ ವೇದಾಂತವಿಚಾರಗಳೂ"

8. 26-6-83ನೆಯ ಭಾನುವಾರ

ಡಾ|| ಹೆಚ್. ಆರ್. ನಾಗೇಂದ್ರ M.E., Ph.d.,
(Vivekananda Kendra, Kanyakumari)
"ಯೋಗಚಿಕಿತ್ಸೆ"

**ವಿ. ಸೂ :-** ಪ್ರತಿ ಬುಧವಾರ ಸಂಜೆ 4 ರಿಂದ ಶ್ರೀರಾಮತೀರ್ಥರವರ ದಿವ್ಯ ಸಂದೇಶಗಳನ್ನು ಕುರಿತು ಪೂಜ್ಯ ಶ್ರೀ|| ಮೂರ್ತಿಗಳವರಿಂದ ಉಪನ್ಯಾಸವುಂಟು.

**ಎಲ್ಲರಿಗೂ ಆದರದ ಸುಸ್ವಾಗತ.**

ಬೆಂಗಳೂರು-560028
ತಾ|| 1-6-1983.

**ಕೆ. ಜಿ. ಸುಬ್ರಾಯಶರ್ಮ,**
ಕಾರ್ಯದರ್ಶಿ.

ADHYATMA-PRAKASHA Regd. No. KRN-I-5

Registered with the Registrar of News-papers
for India under No. R. N. 13244/57

## ಕೇಳಿರಿ

ಆದಿತ್ಯದೇವತೆಯು ಕತ್ತಲೆಯ ಆಚೆಗಿರುವನು. ಮೂರುಕಾಲಗಳಲ್ಲಿಯೂ ಅವನನ್ನು ಬ್ರಹ್ಮವೆಂದು ಚಿಂತಿಸುವವನು ತನ್ನ ಪೂರ್ಣಾಯುಷ್ಯವನ್ನೂ ಅನುಭವಿಸುವನು. ನಡುನಡುವೆ ಸಂಭವಿಸುವ ರೋಗಾದಿಗಳು ಕೂಡ ಉಪಾಸಕನ ದೃಷ್ಟಿಯಿಂದ ತಪಸ್ಸಾಗಿ ಪರಿಣಮಿಸುವದು. ಹೀಗೆ ದೀರ್ಘಾಯುಷ್ಯವನ್ನು ಪಡೆದುಕೊಂಡು ಕಾಲಾತ್ಮನಾದ ಆದಿತ್ಯನ ಚಿಂತನೆಯಿಂದ ಪ್ರಭಾವಿತನಾಗಿ ಕಡೆಯಲ್ಲಿ ಸರ್ವದೇವಾತ್ಮಕನಾದ ಪರಮಾತ್ಮನನ್ನೇ ಅವನು ಹೊಂದುವನು. ಜ್ಯೋತಿರೂಪದಿಂದ ಬೆಳಗುತ್ತಿರುವ ಆದಿತ್ಯನು ಪರಂಜ್ಯೋತಿಯಾದ ಬ[illegible] ಭಾವಿಸಿ ನಾವು ಆದಿತ್ಯಾರಾಧನೆಯಿಂದ ಪೂರ್ಣಾಯುಷ್ಯವನ್ನು ಹೊಂದಬಹುದಾಗಿದೆ.

To.

Sri




M 414 Sri J. Sreenivasa
Murthy, No. 18, II Cross
Kodanda Rampuram
P.O. BANGALORE-3

Edited Printed & Published by H. S. Lakshminarasimha Murthy
as Secretary for The Adhyatma Prakasha Karyalaya,
At The Adhyatma Prakasha Press, Holenarsipur - 573211
6-6-1983.